ಪ್ರಚಾರ ಪುಸ್ತಕ ಮಾಲೆ

155

# ನಾಗಚಂದ್ರ

ಡಾ. ಸಿ. ಪಿ. ಕೃಷ್ಣಕುಮಾರ್



# ಕೆಲವು ಸಾಹಿತ್ಯ ಕೃತಿಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯಿ
೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ

ಪ್ರಚಾರ ಪುಸ್ತಕಮಾಲೆ–೧೫೫

# ನಾಗಚಂದ್ರ

ಡಾ. ಸಿ. ಪಿ. ಕೃಷ್ಣಕುಮಾರ್




1993

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾ ನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸ ಗಳನ್ನು ಏರ್ಪಡಿಸಿ, ಸಂಸ್ಕೃತಿಯ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷ ಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯಂದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯಂದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯಂದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯಂದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತ ರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜ ದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟು ಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ, ಮುಂತಾದ ವಿಷಯಗಳನ್ನು ಕುರಿತ ನೂರ ಐವತ್ತನಾಲ್ಕು

ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಸಿ. ಪಿ. ಕೃಷ್ಣಕುಮಾರ್ ಅವರ 'ನಾಗಚಂದ್ರ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು
೧೪-೪-೧೯೬೮

ಕೆ. ಎಲ್. ಶ್ರೀಮಾಲಿ
ವೈಸ್-ಛಾನ್ಸಲರ್

# ಅರಿಕೆ

ನಾಗಚಂದ್ರನ ಕಾವ್ಯಗಳನ್ನು ಸಾಧ್ಯವಾದಮಟ್ಟಿಗೆ ಕವಿಯ ನುಡಿಗಳಲ್ಲೆ ಪರಿಚಯ ಮಾಡಿಕೊಡುವ ಪ್ರಯತ್ನವನ್ನಿಲ್ಲಿ ಮಾಡಿದ್ದೇನೆ. ಈ ಪುಸ್ತಿಕೆ ಬರಿಯ ಪರಿಚಯದ ಮಟ್ಟದಲ್ಲೆ ನಿಲ್ಲದೆ ತಕ್ಕಮಟ್ಟಿಗೆ ಆಯಾ ಕಾವ್ಯದ ವಿಮರ್ಶೆಯೂ ಆಗ ಬೇಕೆಂಬುದು ನನ್ನ ಆಶಯ. ಇಲ್ಲಿನ ಪರಿಮಿತಿಯಲ್ಲಿ ನನ್ನ ಉದ್ದೇಶ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆಯೋ ತಿಳಿಯದು. 'ಜನ್ನ' ಎಂಬ ನನ್ನ ಮತ್ತೊಂದು ಪುಸ್ತಿಕೆಯಂತೆಯೇ ಇದನ್ನೂ ಯೋಜಿಸಲಾಗಿದೆ.

ಇಲ್ಲಿ ಉದಾಹರಿಸಿರುವ ಪದ್ಯಗಳಲ್ಲಿ ಅಥವಾ ಪದ್ಯಭಾಗ ಗಳಲ್ಲಿ ಬರುವ ಕಠಿಣ ಪದಗಳಿಗೆ ಅಡಿ ಟಿಪ್ಪಣಿಯಲ್ಲಿ ಅರ್ಥ ಕೊಡದೆ, ಕೊನೆಯಲ್ಲಿ ಒಂದು ಅರ್ಥಸೂಚಿಯನ್ನು ಅಕಾರಾದಿ ಯಾಗಿ ಅಳವಡಿಸಲಾಗಿದೆ. ಆಸಕ್ತಿಯುಳ್ಳವರು ಅದರ ಉಪಯೋಗ ಮಾಡಿಕೊಳ್ಳಬಹುದು.

ಈ ಪುಸ್ತಿಕೆಯನ್ನು ಶೀಘ್ರವಾಗಿ ಹೊರತಂದಿರುವ 'ಪ್ರಸಾರಾಂಗ'ದ ಅಧಿಕಾರಿಗಳಿಗೂ, ವಿಶ್ವವಿದ್ಯಾನಿಲಯದ ಮುದ್ರಣಾಲಯದ ನಿರ್ದೇಶಕರಿಗೂ ನನ್ನ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು-೬

ಸಿ. ಪಿ. ಕೆ.

## ದ್ವಿತೀಯ ಮುದ್ರಣವನ್ನು ಕುರಿತು

ಕಾಲು ಶತಮಾನದ ಹಿಂದೆ ಪ್ರಕಟವಾದ ಈ ಪ್ರಚಾರೋಪನ್ಯಾಸ ಪುಸ್ತಿಕೆ ಈಗ ಪುನರ್ ಮುದ್ರಣವನ್ನು ಕಾಣುತ್ತಿದೆ : ಸಂತಸದ ಸಂಗತಿ.

ನಾಗಚಂದ್ರನ ಕಾಲವನ್ನು ಕುರಿತ ಭಾಗವನ್ನು ಈಚಿನ ಸಂಶೋಧನೆಗಳ ಬೆಳಕಿನಲ್ಲಿ ಪರಿಷ್ಕರಿಸಿರುವುದನ್ನು ಬಿಟ್ಟರೆ, ಪುಸ್ತಿಕೆ ಯಲ್ಲಿ ಮತ್ತಾವ ಬದಲಾವಣೆಗಳನ್ನೂ ಮಾಡಿಲ್ಲ.

ಇದರ ಪ್ರಕಾಶಕರಿಗೂ, ಮುದ್ರಕರಿಗೂ ನಾನು ಆಭಾರಿ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು-೬

ಸಿ. ಪಿ. ಕೆ.

# ಪರಿವಿಡಿ

## ೧. ಪೀಠಿಕೆ

ಸುಮಾರು ಒಂದೂವರೆ ಸಹಸ್ರ ವರ್ಷಗಳಷ್ಟು ಪ್ರಾಚೀನವಾಗಿ ಸುದೀರ್ಘ ಶ್ರೀಮಂತವಾದ ಇತಿಹಾಸಕ್ಕೆ ಆಕರವಾಗಿ ಶಿಖರೋಪಶಿಖರ ಸದೃಶರಾದ ವರಕವಿಗಳಿಂದ ಸುಶೋಭಿತವಾಗಿ ಬಹುರತ್ನೋದಾರ ವಾರ್ಧಿಯಾಗಿ ಅನ್ಯಭಾಷಾಸಾಹಿತ್ಯ ಸಮಸ್ಪರ್ಧಿಯಾಗಿ ನಳನಳಿಸುತ್ತಿರುವ ಕನ್ನಡ ಸಾಹಿತ್ಯಕ್ಕೆ ಧರ್ಮವೆ ತಾಯಿಬೇರು, ತಲಕಾವೇರಿ, ಗಂಗೋತ್ರಿ. ನೀತಿ ಮತ್ತು ಕವಿತಾನೀತಿ, ಧರ್ಮ ಮತ್ತು ಕಾವ್ಯಧರ್ಮ–ಇವುಗಳ ಸಮನ್ವಯಕ್ಕಾಗಿ ನಡೆದ ಪ್ರಯತ್ನಪರಂಪರೆಯೆ ಕನ್ನಡ ಸಾಹಿತ್ಯ ಚರಿತ್ರೆಯಾಗಿದೆ. ತಮ್ಮ ತಮ್ಮ ಧರ್ಮವನ್ನು ಸರ್ವತೋಮುಖವಾಗಿ ಪ್ರಸಾರಮಾಡುವ ಉದ್ದೇಶದಿಂದ ಆಯಾ ಧರ್ಮೀಯರು ತಳೆದ ಸರ್ವೋದಯ ದೃಷ್ಟಿಮೂಲವಾದ ಉತ್ಸಾಹ ಛಲಗಳು, ಧರ್ಮಗಳ ಘರ್ಷಣೆ ಮೇಲಾಟಗಳು ವಾಙ್ಮಯದಲ್ಲಿ ಕಾಲಕಾಲಕ್ಕುಂಟಾದ ನವೋತ್ಥಾನಗಳಿಗೆ ಪ್ರೇರಕ ಕಾರಕ ಶಕ್ತಿಗಳಾಗಿ ಒತ್ತಡಗಳಾಗಿ ಕೆಲಸಮಾಡಿವೆ. ಈ ಸ್ಫೂರ್ತಿಯಿಂದ ಕನ್ನಡ ಸಾಹಿತ್ಯಶ್ರೀ ಜೀವಂತವಾಹಿನಿಯಾಗಿ ನವನವೋನ್ಮೇಷಶಾಲಿನಿಯಾಗಿ ಚಿರಯೌವನಶೀಲೆಯಾಗಿ ಮೆರೆದಿದ್ದಾಳೆ.

ಅಧ್ಯಾತ್ಮ, ಧರ್ಮಗಳ ಪ್ರಸಾರಕ್ಕಾಗಲಿ ಕಾವ್ಯಸೃಷ್ಟಿಗಾಗಲಿ ಗೀರ್ವಾಣ ಭಾಷೆಯೊಂದೆ ಸರ್ವಯೋಗ್ಯವಾದುದು, ದೇಶ ಭಾಷೆಗಳೆಲ್ಲ ಅಸ್ಪೃಶ್ಯ ಎಂದು ಪರಿಗಣಿತವಾಗಿದ್ದ ಕಾಲದಲ್ಲಿ ಕನ್ನಡ

ಭಾಷೆಯನ್ನು ಕೈಹಿಡಿದು, ಅದಕ್ಕೆ ಧರ್ಮದ ದೀಕ್ಷೆ ತೊಡಿಸಿ, ಕಾವ್ಯದ ಗದ್ದುಗೆಗೇರಿಸಿ, ಅದರ ಭಾಗ್ಯದ ಬಾಗಿಲನ್ನು ತೆರೆದವರು ಜೈನಕವಿಗಳು. ಈ ಕಾರಣಕ್ಕಾಗಿ ಅವರು ಶ್ರೇಯೋಭಾಗಿಗಳೂ ಪ್ರಭಾತಸ್ಮರಣೀಯರೂ ಆಗಿದ್ದಾರೆ. ಚಂಪೂಪರಂಪರೆ ಕನ್ನಡಕ್ಕೆ ಅವರಿತ್ತ ಅಮೋಘವಾದ ಕೊಡುಗೆ. ಈ ಪರಂಪರೆಯಲ್ಲಿ ಆದಿಕವಿಯಲ್ಲದಿದ್ದರೂ ಅಗ್ರಕವಿಯಾಗಿ, ಸೀಮಾಪುರುಷನಾಗಿ ನಿಂತಿದ್ದಾನೆ, ಪಂಪ. ಅವನು ಚಂಪೂ ಮಾರ್ಗಪ್ರವರ್ತಕನಲ್ಲವಾದರೂ, ಆ ಪ್ರಕಾರಕ್ಕೆ ತನ್ನ ವಿಶಿಷ್ಟ ಪ್ರಭಾವಮುದ್ರೆಯನ್ನೊತ್ತಿ ಪ್ರಸ್ಥಾನ ನಿರ್ಮಾಪಕನಾಗಿದ್ದಾನೆ. ಮುಂದೆ ಬಂದ ಜೈನ ಚಂಪೂಕವಿಗಳಿಗೆಲ್ಲ ಪಂಪನ ಕೃತಿಗಳೆ ದೀಪಸ್ತಂಭಗಳು, ಸ್ತನ್ಯಕುಂಭಗಳು. ಈ ಪಂಪಮಂಡಲದ ಅತ್ಯಂತ ಗಣ್ಯಕವಿಗಳಲ್ಲೊಬ್ಬ ನಾಗಚಂದ್ರ.

ಕನ್ನಡ ಸಾಹಿತ್ಯದ ಒಂದು ಸಂಧಿಕಾಲದಲ್ಲಿ ಬರುತ್ತಾನೆ ನಾಗಚಂದ್ರ. ಅವನ ಕಾಲದ ಪರಿಸ್ಥಿತಿ ಪಂಪಕಾಲೀನ ಪರಿಸ್ಥಿತಿಗಿಂತ ಬಹಳ ವಿಭಿನ್ನವಾಗಿತ್ತು. ಜೈನಧರ್ಮ ಆಗ ಅಧೋಮುಖವಾಗಿದ್ದು, ವೀರಶೈವ ಧರ್ಮ ಉಚ್ಛ್ರಾಯ ದಶೆಯಲ್ಲಿತ್ತು; ವಚನಸಾಹಿತ್ಯ ಆವಿರ್ಭವಿಸಿ ಭಾಷಾಪಲ್ಲಟ ವಾಗಿ ನಡುಗನ್ನಡದ ಪ್ರಾಚುರ್ಯ ಮೊದಲಾಗಿತ್ತು. ಇಂಥ ಸಮಯದಲ್ಲಿ ಜೈನ ಕವಿಗಳಿಗೆ ಸ್ವಧರ್ಮಪ್ರಚಾರ ಅತಿ ಮಹತ್ವದ ವಿಷಯವಾಗಿದ್ದುದು ಸಹಜ. ಎಂತಲೇ ನಯಸೇನ ನಾಗಚಂದ್ರಾದಿ ಕವಿಗಳು ಲೌಕಿಕ ಕಾವ್ಯಗಳನ್ನು ಬರೆಯದೆ, ಜೈನಕಥೆಗಳನ್ನು ಅಥವಾ ಸಕಲಜನಮನಃಪ್ರಿಯವಾದ ವೈದಿಕ ಕಥೆಗಳ ಜೈನ ರೂಪಾಂತರಗಳನ್ನು ಕಾವ್ಯವಸ್ತುವನ್ನಾಗಿ ಆರಿಸಿ ಕೊಳ್ಳುವುದು ಮತ್ತು ಸರಳಶೈಲಿಯಲ್ಲಿ ಬರೆಯುವುದು

ಅನಿವಾರ್ಯವಾಯಿತು. ಆದರೆ ಸಮಕಾಲೀನ ಬಿರುಗಾಳಿಯ ನಡುವೆಯೂ ನಿರ್ಮಲನೇತ್ರನಾಗಿ, ದೃಢಪಾದನಾಗಿ ನಿಂತ ಕವಿ ನಾಗಚಂದ್ರ. ಧರ್ಮಪ್ರಚಾರದ ಆವೇಶದಲ್ಲಿ ಅವನು ಬ್ರಹ್ಮಶಿವನಂತೆ ತನ್ನ ಕೃತಿಯನ್ನು ವಿಕೃತ ವಿಡಂಬನದ ಸಾಧನವನ್ನಾಗಿ, ಅನ್ಯಧರ್ಮನಿಂದೆಯ ಮಾಧ್ಯಮವನ್ನಾಗಿ ಮಾಡಿಕೊಳ್ಳಲಿಲ್ಲ; ಧರ್ಮದ ಬಲಿಪೀಠದ ಮೇಲೆ ಕಲೆಯನ್ನು ತ್ಯಾಗಮಾಡಲಿಲ್ಲ; ಕವಿತೆಯನ್ನೂ ಧರ್ಮವನ್ನೂ ಬೆಸೆಯುವ ಪರಂಪರಾಗತ ಆದರ್ಶದಿಂದ ಚ್ಯುತನಾಗಲಿಲ್ಲ. ಈ ದೃಷ್ಟಿಯಿಂದ ಅವನೊಬ್ಬ ಶಿಷ್ಟ, ವಿಶಿಷ್ಟ ಕವಿಯಾಗಿದ್ದಾನೆ.

## ೨ ಕವಿ ವಿಚಾರ

ನಾಗಚಂದ್ರಕವಿ ತನ್ನ ಕಾಲ, ದೇಶ, ಮನೆತನ, ವೃತ್ತಿ ಮೊದಲಾದ ಯಾವುದೇ ವೈಯಕ್ತಿಕ ವಿಷಯವನ್ನು ತನ್ನ ಕಾವ್ಯಗಳಲ್ಲಿ ಹೇಳಿಕೊಂಡಿಲ್ಲ, ಗುರುಪರಂಪರೆಯೊಂದರ ವಿನಾ. ಆ ಲೌಕಿಕ ಸಂಗತಿಗಳ ಪ್ರಸ್ತಾಪ ಧರ್ಮಾನುರಕ್ತನೂ ಜಿನಭಕ್ತನೂ ಆದ ನಾಗಚಂದ್ರನಿಗೆ ಗೌಣವಾಗಿ, ಅನಗತ್ಯವಾಗಿ ತೋರಿದುದೇನೊ ಸಹಜ. ಆದರೆ ಇದರಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲೊಂದು ಕಗ್ಗಂಟು ಉಳಿಯುವಂತಾಯಿತು.

ಈ ಕವಿಯ ಕಾಲವನ್ನು ಕುರಿತು ವಿದ್ವಾಂಸರು ಮೂರು ವಾದಗಳನ್ನು ಮಂಡಿಸಿದ್ದಾರೆ: (೧) 'ಕವಿಚರಿತೆ'ಕಾರರ ಪ್ರಕಾರ ನಾಗಚಂದ್ರನ ಕಾಲ ಕ್ರಿ ಶ. ೧೧೦೦. ಅವರು ಕೊಡತಕ್ಕ ಆಧಾರಗಳಲ್ಲಿ ಇವು ಕೆಲವು — (ಅ) ಪಂಪರಾಮಾಯಣದಲ್ಲಿ

ಮೇಘಚಂದ್ರನನ್ನು ಸ್ತುತಿಸುವ ಪದ್ಯ ಶ್ರವಣಬೆಳಗೊಳದ ೧೨೭ನೆಯ ಶಾಸನದಲ್ಲಿದೆ. ಮೇಘಚಂದ್ರ ಗತಿಸಿದ್ದು ೧೧೧೫ರಲ್ಲಿ; ಶಾಸನದ ಕಾಲವೂ ಇದೇ. (ಆ) ಎರಡನೆಯ ನಾಗವರ್ಮ 'ಭಾಷಾಭೂಷಣ'ದಲ್ಲಿ ಪಂಪರಾಮಾಯಣದ ಪದ್ಯಭಾಗವನ್ನು ಉದಹರಿಸಿದ್ದಾನೆ. ಅವನ ಕಾಲ, ಕ್ರಿ.ಶ. ೧೧೪೫. (ಇ) 'ನೇಮಿನಾಥಪುರಾಣ'ದ ಕರ್ತೃವಾದ ಕರ್ಣಪಾರ್ಯ ನಾಗಚಂದ್ರನನ್ನು 'ಅದ್ಯತನ' ಎಂದಿದ್ದಾನೆ ಕರ್ಣಪಾರ್ಯನ ಕಾಲ ಕ್ರಿ.ಶ. ೧೧೪೦. (ಈ) 'ಕಂತಿ ಹಂಪನ ಸಮಸ್ಯೆಗಳು' ಎಂಬ ಪುಸ್ತಕದಿಂದ, ಕಂತಿಯೂ ನಾಗಚಂದ್ರನೂ ೧೧೮೦-೧೧೦೬ರ ವರೆಗೆ ಆಳಿದ ದೋರಸಮುದ್ರದ ಒಂದನೆಯ ಬಲ್ಲಾಳನ ಆಸ್ಥಾನದಲ್ಲಿದ್ದರೆಂದು ತಿಳಿದುಬರುತ್ತದೆ. (ಆದರೆ ಕಂತಿ ಕಾಲ್ಪನಿಕ ವ್ಯಕ್ತಿ). (ಉ) ನಾಗಚಂದ್ರನ ಗುರು ಬಾಲಚಂದ್ರಮುನಿ. ಸು. ೧೧೦೦ರ ಶ್ರವಣಬೆಳಗೊಳದ ೬೯ನೆಯ ಶಾಸನದಲ್ಲಿ ಇವನ ಸ್ತುತಿಯಿದೆ. (ಊ) ತ್ರಿಭುವನ ಮಲ್ಲ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ (ಕ್ರಿ.ಶ. ೧೦೭೬-೧೧೨೬) ಹುಟ್ಟಿದ ಬಿಜಾಪುರದ ಒಂದು ಶಾಸನ ನಾಗಚಂದ್ರ ಬರೆದುದಿರಬಹುದು. (ಎ) ನಾಗಚಂದ್ರ ಕ್ರಿ.ಶ. ೧೦೪೦ಕ್ಕಿಂತ ಹಿಂದೆ ಇದ್ದಿರಬೇಕೆಂದು ಎ. ವೆಂಕಟಸುಬ್ಬಯ್ಯನವರು ಹೇಳುತ್ತಾರೆ. (ಏ) ಗೋವಿಂದ ಪೈಗಳ ಅಭಿಪ್ರಾಯದಲ್ಲಿ ನಾಗಚಂದ್ರನ ಕಾಲ ಕ್ರಿ.ಶ. ೧೧೪೦. ಅವರು ಕೊಡುವ ಕಾರಣಗಳಿವು—(ಅ) ಬಾಲಚಂದ್ರ ಎಂಬ ಹೆಸರಿನ ಗುರುಗಳು ಹಲವರಿದ್ದರು. ನಾಗಚಂದ್ರನ ಗುರು ೧೧೧೫ರಲ್ಲಿದ್ದವನು (ಆ)'ಮಲ್ಲಿನಾಥ ಪುರಾಣ'ದ ನಾಯಕನಾದ ವೈಶ್ರವಣನೊಡನೆ ಚಾಲುಕ್ಯ ವಿಕ್ರಮಾದಿತ್ಯನನ್ನು (೧೦೭೬-೧೧೨೬), ಅವನ ಮಗನಾದ ಶ್ರೀಧರನೊಡನೆ

ಮೂರನೆಯ ಸೋಮೇಶ್ವರನನ್ನು (೧೧೨೬-೧೧೩೮) ಹೋಲಿಸಿರುವಂತಿದೆ. ಸೋಮೇಶ್ವರನ 'ಮಾನಸೋಲ್ಲಾಸ'ದ ಕಾಲ ಕ್ರಿ.ಶ. ೧೧೨೯. ಆದಾದ ಮೇಲೆ 'ಮಲ್ಲಿನಾಥ ಪುರಾಣ' ರಚಿತವಾಗಿರಬೇಕು. ಶ್ರವಣಬೆಳಗೊಳದ ೧೪೦ನೆಯ ಶಾಸನದ (ಕಾಲ : ೧೧೪೫) ಪದ್ಯಗಳು ಪಂಪರಾಮಾಯಣದವೇ ಆಗಿವೆ.

ನಾಗಚಂದ್ರನನ್ನು ಸು. ೧೧೦೦ ರಲ್ಲಿರಿಸುವುದಕ್ಕೆ ಕೆಲವು ಖಚಿತವಾದ ಆಧಾರಗಳು ಈಚೆಗೆ ಸಿಕ್ಕಿವೆ: ಪಂಚಲಿಂಗಾಲದ ಶಾಸನ, ಕಣ್ಣೂರು ಶಾಸನ ಮತ್ತು ಬಾಬಾನಗರದ ಶಾಸನ. ಇವುಗಳಲ್ಲಿ ಬಹು ಮುಖ್ಯವಾದುದು ಬಿಜಾಪುರ ತಾಲೂಕಿನ ಬಾಬಾನಗರದ ಶಾಸನ. ಇದು ರಾಯಮುರಾರಿ ಸೋವಿದೇವನ ಕಾಲದ (೧೧೬೭-೧೧೭೬) ಶಾಸನ. ಇದರಲ್ಲಿ ನಾಗಚಂದ್ರನ ಮೊಮ್ಮಕ್ಕಳಾದ ನಾಗಚಂದ್ರ, ನಾಗಾರ್ಯರ ಉಲ್ಲೇಖವಿದೆ. ಇವರಿಗಿಂತ ಕನಿಷ್ಠ ಐವತ್ತು ವರ್ಷಗಳ ಹಿಂದಾದರೂ ಇದ್ದಿರಬೇಕು, ಕವಿ. ಈ ಅಂಶವನ್ನೂ ಇತರ ಕೆಲವು ಸಾಕ್ಷ್ಯಗಳನ್ನೂ ಕೂಡಿಸಿ ಹೇಳುವುದಾದರೆ, ನಾಗಚಂದ್ರನ ಕೃತಿರಚನೆಯ ಕಾಲ ೧೦೫೦-೧೧೦೦. ಪಂಪರಾಮಾಯಣದ ರಚನೆ ೧೧೧೦ಕ್ಕಿಂತ ಹಿಂದೆಯೇ ಆಗಿದ್ದಿರಬೇಕು. ಆದ್ದರಿಂದ ಕವಿಚರಿತೆಕಾರರ ನಿರ್ಣಯವೇ ನಿಲ್ಲುತ್ತದೆ.

ನಾಗಚಂದ್ರನ ಊರು ಯಾವುದೋ ಸರಿಯಾಗಿ ತಿಳಿಯದು. ಅವನು "ವಿಜಯಪುರಕ್ಕಲಂಕರಣಮಾಗಿರೆ ಮಲ್ಲಿಜಿನೇಂದ್ರಗೇಹಮಂ" ನಿರ್ಮಿಸಿದುದಾಗಿ ಹೇಳಿಕೊಂಡಿದ್ದಾನೆ. ಈ 'ವಿಜಯಪುರ' ಈಗಿನ ಬಿಜಾಪುರವೆಂದು ಸಾಮಾನ್ಯವಾದ ಊಹೆ. ನಾಗಚಂದ್ರ ಬರೆದಿರಬಹುದಾದ ಶಾಸನ ಸಿಕ್ಕಿರುವುದೂ ಬಿಜಾಪುರದಲ್ಲಿಯೆ. ಆದ್ದರಿಂದ ಅವನು ಬಿಜಾಪುರದವನೆಂಬುದು

ಒಂದು ಅಭಿಪ್ರಾಯ. ಇದು ಸರಿಯೆಂದು ತೋರುತ್ತದೆ. ಆದರೆ ಅವನು ತಲಕಾಡಿನ ಹತ್ತಿರ ಇರುವ ವಿಜಯಪುರದವನಾಗಿರ ಬಾರದೇಕೆ ಎಂಬುದು ಮತ್ತೊಂದು ವಾದ: ವೀರ ಬಲ್ಲಾಳನ ಆಸ್ಥಾನದಲ್ಲಿ ಕವಯಿತ್ರಿಯಾಗಿದ್ದಳೆಂದು ಹೇಳಲಾದ ಕಂತಿಗೂ ನಾಗಚಂದ್ರನಿಗೂ ಸಂಬಂಧಿಸಿದ ಕತೆಗಳ ಪ್ರಕಾರ ನಾಗಚಂದ್ರ ಹೊಯ್ಸಳ ರಾಜಾಸ್ಥಾನದಲ್ಲಿದ್ದನೆಂದು ಹೇಳಬೇಕಾಗುತ್ತದೆ; ಆ ಕಾಲದಲ್ಲಿ ತಲಕಾಡು ಹೊಯ್ಸಳರ ಅಧೀನದಲ್ಲಿತ್ತು ಮತ್ತು ಜೈನಧರ್ಮದ ಕೇಂದ್ರವಾಗಿತ್ತು. ಬಿಜಾಪುರದ ಶಾಸನವನ್ನು ನಾಗಚಂದ್ರ ಸ್ವತಃ ಬರೆದನೆಂದು ಖಚಿತವಾಗಿ ಹೇಳುವಂತಿಲ್ಲ; ಅಲ್ಲಿ ಈಗ ಜಿನಭವನ ಯಾವುದೂ ಇಲ್ಲವೆಂಬುದನ್ನೂ ಗಮನಿಸ ಬಹುದು.

ಸದ್ಯಕ್ಕೆ ಉಪಲಬ್ಧವಾಗಿರುವ ನಾಗಚಂದ್ರನ ಕೃತಿಗಳು ಎರಡು: 'ಮಲ್ಲಿನಾಥ ಪುರಾಣ' ಮತ್ತು 'ರಾಮಚಂದ್ರ ಚರಿತ ಪುರಾಣ' (ಅಥವಾ ಪಂಪರಾಮಾಯಣ). 'ಜಿನ ಮುನಿ ತನಯ' ಮತ್ತು 'ಜಿನಾಕ್ಷರಮಾಲೆ' ಎಂಬ ಕೃತಿಗಳು ಕೂಡ ನಾಗಚಂದ್ರರಚಿತವೆಂದು ಕ್ರಿ.ಶ. ೧೮೩೮ ರಲ್ಲಿದ್ದ ದೇವಚಂದ್ರನ ಹೇಳಿಕೆ. ಇದು ಅವಿಶ್ವಸನೀಯವಾದುದು. 'ಜಿನಮುನಿತನಯ'ದಲ್ಲಿ ಕರ್ತೃವಿನ ಹೆಸರಿಗೆ ಕವಿ ನೂತ ನಾಗಚಂದ್ರ, ಕವಿವಿನುತ ನಾಗಚಂದ್ರ, ಕವಿನೂತ ನಾಗವರ್ಮ ಎಂದು ಬೇರೆಬೇರೆ ಪಾಠಾಂತರಗಳಿವೆ. ಇದನ್ನು ಇತ್ತೀಚಿನ ಕವಿಯೊಬ್ಬ ಬರೆದು ನಾಗಚಂದ್ರನಿಗೆ ಆರೋಪಿಸಿರಬಹುದು. 'ಜಿನಾಕ್ಷರಮಾಲೆ' ಸಿಕ್ಕಿಲ್ಲ. 'ಯೋಗಾಮೃತ' ಎಂಬ ಕೃತಿಯೂ ನಾಗಚಂದ್ರನದೆಂಬ ಮತವೊಂದಿದೆ. ಇದಕ್ಕೆ ಕಾರಣ 'ಮಲ್ಲಿನಾಥಪುರಾಣ'ದ ಒಂದು ಪದ್ಯ 'ಯೋಗಾ

ವೃತ್ತ'ದಲ್ಲಿರುವುದು. ಇಷ್ಟರಿಂದಲೆ ಅದರ ಕರ್ತೃ ನಾಗಚಂದ್ರ ನೆಂದು ಸಿದ್ಧವಾಗುವುದಿಲ್ಲ. 'ಕಾಮನ ಕಾಳಗ' ಎಂಬೊಂದು ಕೃತಿ ಕೂಡ ನಾಗಚಂದ್ರನ ಹೆಸರಿನಲ್ಲಿರುವಂತಿದೆ.

ನಾಗಚಂದ್ರನಿಗೆ ಯಾವುದೇ ರಾಜಾಶ್ರಯವಿದ್ದಂತೆ ಅವನ ಕೃತಿಗಳಿಂದ ತಿಳಿದುಬರುವುದಿಲ್ಲ. ಅವನು ರಾಜಾಶ್ರಯ ಕಾಂಕ್ಷೆಯಿಲ್ಲದ ಸ್ವತಂತ್ರ ಮನೋಧರ್ಮದ ಕವಿಯೆಂದೆ ತೋರುತ್ತದೆ. ಅವನು ರಾಜಕವಿಯೂ ಅಲ್ಲ, ಜನಕವಿಯೂ ಅಲ್ಲ, ಜಿನಕವಿ. ಅವನ ನಿಷ್ಠೆ ಗೌರವ ಪೂಜೆಗಳಿಗೆ ಪಾತ್ರ ರಾದವರು ಇಬ್ಬರೇ ಇಬ್ಬರು: ಒಬ್ಬ ಅವನ ಗುರು ಬಾಲಚಂದ್ರ: ಮತ್ತೊಬ್ಬ ಅವನ ಅಧಿದೈವವಾದ ಜಿನೇಂದ್ರ. ಈ ಇಬ್ಬರ ಹೊರತು ಅವನ ಹೃದಯ ಪೀಠದಲ್ಲಿ ಮತ್ತಾರಿಗೂ ಸ್ಥಾನ ವಿರಲಿಲ್ಲ.

ಜಿನಪತಿಗಂ ಜಿನಮುನಿಗಂ
ಜಿನಾಗಮಕ್ಕಂ ಜಿನಾಧಿಪತಿಭವನಕ್ಕಂ
ಜಿನಗುಣಸಂಪತ್ತಿಗಮೆಱ
ಪನೆಜಗಮಱಿದವರ್ಗೆ ನಾಗಚಂದ್ರಕವೀಂದ್ರಂ

ಎಂದು ಅವನು ಛಲದಿಂದ ಉದ್ಘೋಷಿಸುತ್ತಾನೆ. ಈ ಪರಿಯ ಗುರುಭಕ್ತಿ ಮತ್ತು ಜಿನಭಕ್ತಿ ನಾಗಚಂದ್ರನ ಕಾವ್ಯಗಳಲ್ಲಿ ಉಜ್ವಲವಾಗಿ ಪ್ರಕಟವಾಗಿವೆ. ಅವನ ವ್ಯಕ್ತಿತ್ವ ಪ್ರಧಾನವಾಗಿ ಧರ್ಮಪರವಾದುದು ; ಅವನ "ಆತ್ಮದಲ್ಲಿ ಧರ್ಮ ಮುಂದು, ಅವಳಿ ಜವಳಿಯಾಗಿ ಕವಿತೆ ಅದರ ಹಿಂದು". ಅವನ ಎರಡೂ ಕಾವ್ಯಗಳಲ್ಲಿ ಮೈದಾಳಿರುವ ಜಿನಸ್ತುತಿ ಅವನ 'ಆತ್ಮಸಾರ' ವಾಗಿ, ವೈಯಕ್ತಿಕ ಮನೋಧರ್ಮದ ದ್ಯೋತಕವಾಗಿ ಕಂಡು

ಬರುತ್ತದೆ. ವಿಜಯಪುರದಲ್ಲಿ ಅವನು ಜಿನಾಲಯವನ್ನು ಕಟ್ಟಿಸಿದ್ದು ಈ ಧಾರ್ಮಿಕ ಪ್ರವೃತ್ತಿಯನ್ನೇ ಲೋಕವಿಶ್ರುತವಾಗುವಂತೆ ಸಾರುತ್ತಿದೆ.

ನಾಗಚಂದ್ರ ಧರ್ಮಾಭಿಮಾನಿಯಷ್ಟೇ ಅಲ್ಲದೆ ಉತ್ತಮ ಕಲೋಪಾಸಕ, ರಸಿಕ. ಅವನಿಗೆ ಶಿಲ್ಪ, ಚಿತ್ರ, ಸಂಗೀತ ಮುಂತಾದ ಕಲೆಗಳಲ್ಲಿಯೂ ಅಶ್ವಶಾಸ್ತ್ರಾದಿ ಶಾಸ್ತ್ರಗಳಲ್ಲಿಯೂ ಒಳ್ಳೆಯ ಅಭಿಜ್ಞತೆಯಿದ್ದಂತೆ ತೋರುತ್ತದೆ. ಅವನ ಚಿತ್ತವೃತ್ತಿಯಲ್ಲಿ ನಯ, ಸೌಕುಮಾರ್ಯ, ಲಾಲಿತ್ಯಗಳೆ ಪ್ರಮುಖವಾಗಿದ್ದಂತೆ ಅವನು ನಿರೂಪಿಸುವ ವಸ್ತುವಿನಿಂದ ಮತ್ತು ಪ್ರಯೋಗಿಸುವ ಶೈಲಿಯಿಂದ ಅಭಿವ್ಯಕ್ತವಾಗುತ್ತದೆ. ಉಳಿದ ರಸಗಳಿಗಿಂತ ಶಾಂತರಸದಲ್ಲಿ ಅವನಿಗೆ ಸ್ವಾಭಾವಿಕವಾಗಿ ಹೆಚ್ಚಿನ ಅಭಿರುಚಿ, ಆಸಕ್ತಿ, ಶಕ್ತಿ.

ಅಭಿನವಪಂಪ, ಭಾರತೀಕರ್ಣಪೂರ, ಕವಿತಾಮನೋಹರ, ಸಾಹಿತ್ಯಸರ್ವಜ್ಞ ಮುಂತಾದುವು ನಾಗಚಂದ್ರನಿಗಿದ್ದ ಬಿರುದುಗಳು. ಇವುಗಳಲ್ಲಿ 'ಅಭಿನವಪಂಪ' ಎಂಬುದು ಮುಖ್ಯವಾದುದು ; ನಾಗಚಂದ್ರ ಈ ಹೆಸರಿನಲ್ಲಿಯೆ ಸುಪ್ರಸಿದ್ಧನಾಗಿರುವುದು. ಇದು ಬೇರೆಯವರು ಕೊಟ್ಟ ಬಿರುದೊ, ನಾಗಚಂದ್ರನೆ ಇಟ್ಟುಕೊಂಡದ್ದೊ ಗೊತ್ತಾಗುವುದಿಲ್ಲ. ತಾನು ಅಭಿನವಪಂಪ ಎನ್ನುವಲ್ಲಿ ನಾಗಚಂದ್ರ ಆತ್ಮಪ್ರತ್ಯಯಕ್ಕಿಂತ ಹೆಚ್ಚಾಗಿ ಪಂಪನ ಬಗ್ಗೆ ತನಗಿರುವ ಅತಿಶಯ ಗೌರವಾದರಗಳನ್ನು ಸೂಚಿಸುತ್ತಾನೆ. ಪಂಪಪಥವನ್ನು ಅವನು ಅನುಸರಿಸಿರುವುದೂ ಆ ಮಹಾಕವಿಯಿಂದ ಪ್ರಭಾವಿತನಾಗಿರುವುದೂ ಈ ಅಭಿಧಾನದಿಂದ ಸುವಿದಿತವಾಗುತ್ತದೆ.

## ೩. ನಾಗಚಂದ್ರನ ಕವಿಕಾವ್ಯ ಮೀಮಾಂಸೆ

ನಾಗಚಂದ್ರ ತನ್ನ ಕಾವ್ಯಗಳ ಪ್ರಾರಂಭದಲ್ಲಿ ಪೂರ್ವ ಕವಿಸ್ತವನದ, ಕುಕವಿನಿಂದೆಯ, ಸ್ವಕಾವ್ಯಪರಿಚಯದ ನಿಮಿತ್ತದಿಂದ ಕವಿಕಾವ್ಯಚರ್ಚೆಗೆ ಸಂಬಂಧಿಸಿದ ಎಷ್ಟೋ ಅಮೂಲ್ಯ ಅಭಿಪ್ರಾಯಗಳನ್ನು ತಿಳಿಸುತ್ತಾನೆ. ಇವು ಅವನ ವಿಚಾರ ಪಟುತ್ವಕ್ಕೆ, ವಿಮರ್ಶನ ಶಕ್ತಿಗೆ, ಮಿಗಿಲಾಗಿ ಉದಾತ್ತ ಮನೋಭಾವಕ್ಕೆ ಕನ್ನಡಿ ಹಿಡಿಯುತ್ತವೆ. ಅವನ ಜಿನಭಕ್ತಿಯ, ಧರ್ಮಾಸಕ್ತಿಯ ನೆಲೆಯಿಂದಲೆ ಪ್ರಣೀತವಾದದ್ದು ಈ ಕವಿ ಕಾವ್ಯ ಮೀಮಾಂಸೆ.

ಕಾವ್ಯವನ್ನು ಕುರಿತು ನಾಗಚಂದ್ರನ ಕಲ್ಪನೆ ಅತ್ಯುನ್ನತವಾಗಿದೆ. ಕವಿತೆ ಕೇವಲ ಲಘು ಮನೋರಂಜನದ, ಸದ್ಯಃ ತೃಪ್ತಿ ಸಂತೋಷಗಳ ಸಾಧನವಾಗಬಾರದು ; ಅದು ಸಮಷ್ಟಿ ಕಲ್ಯಾಣನಿಷ್ಠವಾದ, ಲೋಕತಾರಕವಾದ, ಆತ್ಮೋನ್ನತಿ ಪೋಷಕವಾದ ಚಿರಂತನ ಶಕ್ತಿಯಾಗಬೇಕು ಎನ್ನುವುದು ನಾಗ ಚಂದ್ರನ ಆಶಯ. ಸೌಂದರ್ಯವೊಂದೆ ಕಾವ್ಯದ ಮೌಲ್ಯವಲ್ಲ: ಶಿವದ ಆಲಂಬನ ಅದಕ್ಕೆ ಬೇಕು; ಅದು ಶಿವ–ಸೌಂದರ್ಯಗಳ ಮಧುರಸಂಗಮವಾಗಿ ಮೋಕ್ಷಕಾರಕವಾಗಬೇಕು ಎಂಬುದು ಅವನ ನಿಲುವು. ತನ್ನ ಕಾವ್ಯದಲ್ಲಿ ವಿದ್ಯಾನಟಿ ನರ್ತಿಸಲಿ ಎಂದು ಅವನು ಹಾರೈಸುವಾಗ ಇದು ಸೊಗಸಾಗಿ ಪ್ರಕಾಶ ಗೊಂಡಿದೆ :

ಪರಮಬ್ರಹ್ಮ ಶರೀರಪುಷ್ಟಿ ಜನತಾಂತರ್ದೃಷ್ಟಿ ಕೈವಲ್ಯಬೋ
ಧರಮಾಸಾತ್ವಿಕ ಹಾರಯಷ್ಟಿ ಕವಿತಾವಲ್ಲೀ ಸುಧಾವೃಷ್ಟಿ ಸ
ರ್ವ ರಸೋತ್ಪಾದ ನವೀನಸೃಷ್ಟಿ ಬುಧಹರ್ಷೋತ್ಕೃಷ್ಟಿ ಸರ್ವಾಂಗ ಸುಂ
ದರಿ ವಿದ್ಯಾನಟನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್

ಕವಿ ಧರ್ಮಪ್ರಸಾರಕನಾಗಬೇಕು; ಆದರೆ ಆ ಪ್ರಸಾರ ಕಾವ್ಯರೂಪದಲ್ಲಿ ರಸಾತ್ಮಕವಾಗಿ ನಡೆಯಬೇಕು. ಧರ್ಮ, ಕಾವ್ಯಧರ್ಮಗಳ ಸಮ್ಮಿಲನವೆ ಮಹಾಕವಿಗಳ ಸುಮಾರ್ಗ ವಾಗಿದೆ. ಹಾಗೆ "ಉಪದೇಶಂಗೆಯ್ದು ಕಾವ್ಯಚ್ಛಲದಿನಖಿಳ ಧರ್ಮಂಗಳಂ, ಲೋಕಮಂ ಧರ್ಮಪ್ರಸ್ಥಾನದೊಳ್ ಯೋಜಿಸಿ" ಮಾನ್ಯರಾದ 'ಕವಿಜ್ಯೇಷ್ಠ'ರನ್ನು ನಾಗಚಂದ್ರ ಸ್ಮರಿಸುತ್ತಾನೆ

ಕಾವ್ಯದಲ್ಲಿ ಮುಖ್ಯವಾದದ್ದು ರೀತಿಯಲ್ಲ, ವಸ್ತು ಎಂಬುದು ನಾಗಚಂದ್ರನ ದೃಢವಾದ ಗ್ರಹಿಕೆ. ವಸ್ತು ಮಹತ್ವದಿಂದಲೆ ಕಾವ್ಯ ಶ್ರೇಷ್ಠವಾಗುವುದು, ಸಫಲವಾಗುವುದು. ಆದ್ದರಿಂದ ಕಾವ್ಯಕ್ಕೆ ಘನವಾದ–ನೈತಿಕ ಮೌಲ್ಯವುಳ್ಳ–ವಸ್ತುವನ್ನು, ಉದಾತ್ತನಾದ ನಾಯಕನನ್ನು ಆರಿಸಿಕೊಳ್ಳಬೇಕೆಂದು ಅವನು ಹೇಳುತ್ತಾನೆ. "ಕಾಲಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನ ಮಾಲೆಯಂತುಪಾದೇಯ ಮೇನಕ್ಕುಮೋ...ವಿಷಯ ಮೊಪ್ಪದೊಡಾವುದುಮೊಪ್ಪಲಾರ್ಕುಮೇ?" ಎಂಬುದು ಅವನ ಪ್ರಶ್ನೆ. ಇಲ್ಲಿ ಕವಿ ವಸ್ತು, ರೀತಿಗಳನ್ನು ಕುರಿತು ಆಧುನಿಕ ಜಿಜ್ಞಾಸೆಗೆ ಉಪಯುಕ್ತವಾಗುವ ವಿಚಾರವನ್ನು ವ್ಯಕ್ತಪಡಿ ಸಿದ್ದಾನೆಂದರೆ ತಪ್ಪಾಗದು. ವಸ್ತು ಅಮುಖ್ಯ, ರೀತಿಯೆ ಮುಖ್ಯ ಎನ್ನುವುದು "ಕಲೆಗಾಗಿ ಕಲೆ" ಎಂಬ ಪಂಥದ ಸೂತ್ರ; ಇದು ಎಷ್ಟು ಅಪಾಯಕಾರಿಯೆಂಬುದನ್ನು ಅನೇಕ ವಿಮರ್ಶಕರು ವಿವರಿಸಿ ಈ ವಾದವನ್ನು ಖಂಡಿಸಿದ್ದಾರಷ್ಟೆ. ನಮ್ಮ ಹಿಂದಿನ ಕವಿಗಳೂ 'ಈ ಕಲೆಗಾಗಿ ಕಲೆ'ವಾದಕ್ಕೆ ವಿರುದ್ಧವಾಗಿದ್ದವರೇ. ನಾಗಚಂದ್ರ ಅವರನ್ನು ಪ್ರತಿನಿಧಿ ಸುತ್ತಿದ್ದಾನೆ. ಆದರೆ "ವಿಷಯಮೊಪ್ಪದೊಡಾವುದುಮೊಪ್ಪ ಲಾರ್ಕುಮೇ" ಎಂದು ಪ್ರಾಯಃ ಯಾರೂ ಹೀಗೆ ಸ್ಪಷ್ಟವಾಗಿ ಹೇಳಿರಲಿಲ್ಲ.

ಕಾವ್ಯ ರಾಗದ್ವೇಷವಿರಹಿತವಾಗಿರಬೇಕು; ಕವಿ ರಸಸ್ತರಕ್ಕೇರದೆ, ನಿರ್ಮಲಮನಸ್ಕನಾಗದೆ, ತನ್ನ ಚಿತ್ತದಲ್ಲಿ ಮಡುಗೊಂಡ ಭಾವೋದ್ರೇಕವನ್ನು ಕಾವ್ಯಪ್ರಣಾಳಿಕೆಯಲ್ಲಿ ಹರಿಸಿದರೆ ಅದು ಅನಿಷ್ಟ ಪರಿಣಾಮಕಾರಿಯಾಗುತ್ತದೆ; ಅದು "ಬಿತ್ತಿ ಬೆಳೆದಂತಕ್ಕುಂ ವಿಷೋದ್ಯಾನಮುಂ". ಈ ವಿಷೋದ್ಯಾನ ಕಣ್ಣಿಗೆ ಆಪ್ಯಾಯಮಾನವಾಗಬಹುದು, ಚೇತೋಹಾರಿಯಾಗಬಹುದು; ಆದರೆ ಆತ್ಮಕ್ಕೆ ಮಾರಕವಾಗುತ್ತದೆ. ಇಂತಹ ವಿಷೋದ್ಯಾನವನ್ನು ಬೆಳೆಯದೆ ಕವಿ ಅಮೃತೋದ್ಯಾನವನ್ನು ಬೆಳೆಯಬೇಕು; ಸಮಾಜದ ಒಳ್ಪು ಅವನ ದೃಷ್ಟಿಯಲ್ಲಿರಬೇಕು. ಇದು ನಾಗಚಂದ್ರನ ವಿವೇಕವಾಣಿ.

ಸುಕವಿಗಳ ಶಕ್ತಿ ಯೋಗ್ಯತೆಗಳೇನೆಂಬುದನ್ನು ನಾಗಚಂದ್ರ ಸಂಗ್ರಹಿಸಿ ಹೇಳುತ್ತಾನೆ: ಅವರ ಕೃತಿ ವಿವಿಧಾಲಂಕಾರಗಳಿಂದ ರಂಜಿಸಬೇಕು; ಶಬ್ದಗಳನ್ನು ಅವರು ಕೈವಶಮಾಡಿಕೊಂಡಿರಬೇಕು; ಅವರ ವಚಸ್ಸಂಪತ್ತಿ ಕರ್ಣಾಮೃತವಾಗಬೇಕು; ರಸಭಾವಗಳನ್ನು ತೋರಬೇಕು; ಅವರಿಂದ ಜಾಡ್ಯವ್ಯವಹಾರ ಹಿಂಗಿ ಸೃಷ್ಟಿ ಸುಖಮಯವಾಗಬೇಕು. ಅಂಥ ಕವಿಗಳು ಶಾಶ್ವತಕೀರ್ತಿ ಭಾಜನರಾಗುತ್ತಾರೆ. ಇಲ್ಲಿ ಕೂಡ ನಾಗಚಂದ್ರ ಕಾವ್ಯದ ಸರ್ವಾಂಗಗಳನ್ನೂ ಸರ್ವ ಪ್ರಯೋಜನಗಳನ್ನೂ ಸೂಚಿಸುತ್ತಾನೆ.

ಕುಕವಿಗಳನ್ನೂ ಅರಸಿಕರನ್ನೂ ದುರ್ಜನರನ್ನೂ ಅವನು ವಿಡಂಬಿಸಿದ್ದಾನೆ. ಅನ್ಯಾನುಕರಣನಿರತರಾದ ಕವಿಗಳನ್ನು ಅವನು ಹೀಗೆ ಟೀಕಿಸುತ್ತಾನೆ:

> ಪೆಱರ ನುಡಿ ಪೆಱರ ಮಾರ್ಗಂ
> ಪೆಱರರ್ಥಂ ಪೆಱರ ದೇಸಿ ಪೆಱರೋಜೆಯೆನಲ್

> ಪೆಱರ ಬೞಿಸಂದು ತನ್ನಂ
> ಮೆಱೆವಂ ಕವಿಯಲ್ಲವಾಟಕಾಱರ ಜೋಹಂ

ಕವೀಶ್ವರರು ಬರೆದ ಕೃತಿ ಕಲ್ಲೆದೆಯ ಮೂರ್ಖರಿಗೆ ಸಂತಸ ವೀಯುವುದಿಲ್ಲ ; "ಶಿಲಾಪ್ರತಿಮೆಯನುಚರ್ಗುಮೆ ಮದನ ಮೋಹನಬಾಣಂ?". ರಸವತ್ಕಾವ್ಯವನ್ನು ಸುಜನರು ಪ್ರೀತಿ ಯಿಂದ ಆಲಿಸುತ್ತಾರೆ; ದುರ್ಜನರು ದುರ್ಬೋಧೆಯನ್ನಲ್ಲದೆ ಸತ್ಕಾವ್ಯವನ್ನು ಕೇಳರು : "ನಿಷ್ಠುರವಜ್ರಕಂಡಹತಿಯಿಂ ಕೀಟಂ ಭರಂಗೆಯ್ದು ಖಂಡಿಸುಗುಂ, ತುಂಬಿವೊಲೀಂಟಿ ರಾಗಿ ಸುಗುಮೇ ಹೈಮಾಂಬುಜಾಮೋದಮಂ ?" ಗುಣಗ್ರಾಹಿಗಳಾದ ಸಜ್ಜನರು ವಚನಪ್ರೌಢಿ, ಅರ್ಥಪ್ರಚುರತೆಗಳನ್ನು ಹೊಗಳು ತ್ತಾರೆ; ಮತ್ಸರಚಿತ್ತರು ಅರಿತುಕೊಂಡರೂ ಹೊಗಳುವುದಿಲ್ಲ. ಆದರೆ ಕವಿ ಮಹಾಸಮರ್ಥನಾಗಿದ್ದರೆ ಅವನ ಪ್ರಭಾವದಿಂದ ದುರ್ಜನರೂ ರಸಮಗ್ನರಾಗುತ್ತಾರೆ-"ತಣ್ಪಂ ಹುತಾಶನಂ ಮಂತ್ರಶಕ್ತಿಯಿಂ ತಾಳ್ದುವವೋಲ್".

ಕವಿತಾರಸವನ್ನು ಕವಿಯೆ ಆಸ್ವಾದಿಸಬಲ್ಲ ಎಂಬುದ ನಾಗಚಂದ್ರನ ಅಂತಿಮ ನಿರ್ಣಯ :

> ರಸಮಂ ನಾಲಗೆ ಕವಿತಾ
> ರಸಮಂ ಕವಿ ಕುಸುಮರಸಮನಳಿಮಾಲೆ ಸುಧಾ
> ರಸಮಂ ಸುರರಕ್ಷಯ ಸುಖ
> ರಸಮಂ ಪರಮಾತ್ಮನಱಿವನುೞಿದವರೞಿಯರ್

ಕವಿಹೃದಯವಿದ್ದರೇ ಕಾವ್ಯಾನುಭೂತಿ ಸಾಧ್ಯ ; ಸಹೃದಯ ರಾಗವಿದ್ದರೆ ಅದು ಸಿದ್ಧಿಸದು ಎಂಬ ತತ್ತ್ವವನ್ನಿಲ್ಲಿ ಹೇಳುತ್ತಿ ದ್ದಾನೆ ನಾಗಚಂದ್ರ.

ಕಾವ್ಯರಚನೆಯಿಂದ ಕವಿ ನಿರೀಕ್ಷಿಸಬೇಕಾದ ಪ್ರತಿಫಲ

ವೇನು? ಧನವೆ, ಕೀರ್ತಿಯೆ? ಅಲ್ಲವೆನ್ನುತ್ತಾನೆ ಈ ಕವಿ. ಕಾವ್ಯವನ್ನೋದುವ ಸಜ್ಜನರ ಸಹಾನುಭೂತಿ, ತಾದಾತ್ಮ್ಯ, ಅದರ ಫಲವಾದ ಪ್ರಶಂಸೆ-ಇಷ್ಟರಿಂದಲೇ ಕವಿ ಧನ್ಯ ಎನ್ನುತ್ತಾನೆ: “ಭಾವಿಸಿ ಭಾವಿಸಿ ಮೆಚ್ಚಿ ಮೆಚ್ಚಿ ಪೊಣ್ಮಿದ ಪುಲಕಂಗಳಿಂ ನಯನದೊಳ್ ಕರೆಗಣ್ಮಿದ ಹರ್ಷಬಾಷ್ಪ ವರ್ಷದಿನನುರಾಗಮಂ ಪಡೆವ ಸಜ್ಜನ ಸಂಸ್ತವವೊಂದೆ ಸಾಲದೇ?” ಕವಿಪಡೆವಾದ ಕಾವ್ಯಪ್ರಯೋಜನವನ್ನು ಹಿಂದಿನ ಆಲಂಕಾರಿಕರು ಯಾರೂ ಈ ರೀತಿ ಹೇಳಲಿಲ್ಲ.

ಕಾವ್ಯದಲ್ಲಿ ಶಾಂತರಸಕ್ಕೆ ಅಗ್ರಪ್ರಾಶಸ್ತ್ಯವಿರಬೇಕೆಂದು ನಾಗಚಂದ್ರನ ಮತ. ‘ಅಕ್ಷಯಸುಖ’ ಪ್ರದವಾದ ಶಾಂತದ ಪ್ರತಿಪಾದನೆಯೆ ಅವನ ಕೃತಿಗಳ ಪರಮಧ್ಯೇಯ.

## ೪. ‘ ಮಲ್ಲಿನಾಥಪುರಾಣ ’

‘ಮಲ್ಲಿನಾಥಪುರಾಣ’ ನಾಗಚಂದ್ರನ ಪ್ರಥಮವಿರಚನೆ. ಇದು ೧೯ನೆಯ ತೀರ್ಥಂಕರನಾದ ಮಲ್ಲಿನಾಥನ ಕತೆಯನ್ನು ನಿರೂಪಿಸುವ ಜೈನಪುರಾಣ, ಧಾರ್ಮಿಕಕೃತಿ. ‘ದುರಿತಕ್ಷಯ ಕಾರಣ’ವಾದ ಈ ಕತೆಯನ್ನು “ವಿಮಲಯಶೋವಿಶುದ್ಧ ಮಣಿಯಂ ಪಡೆಯಲ್ಕೆ” ತಾನು ಹೇಳಿದುದಾಗಿ ನಾಗಚಂದ್ರ ನಿವೇದಿಸುತ್ತಾನೆ. ‘ನಿರ್ಮಲದಯಾರಸಮುದ್ರ’ ವಾದ ಈ ಜಿನಕಥಾಸಮುದ್ರವನ್ನು ದಾಟಲೆಳಸುವ ತನ್ನ ಕವಿತ್ವ ಚೈತ್ರ ಯಾತ್ರೆಗೆ ಭವ್ಯಜನರೇ ಕರ್ಣಧಾರರೆಂದು ವಿನಯದಿಂದ ಹೇಳುತ್ತಾನೆ. “ಕಿಱಿದೀ ಕಥಾಪರಿಸ್ಪಂದಮಿದಂ ನಿಮಿರ್ಚಿ ಕವಿತಾರಸಮಂ ನೆಱೆ ಪೇಳ್ವಿರಿಲ್ಲ ಮುನ್” ಎಂಬ ಭವ್ಯರ ಅಭಿಪ್ರಾಯಕ್ಕೆ, ಆಹ್ವಾನಕ್ಕೆ ಅವನು ಮನ್ನಣೆಕೊಟ್ಟು ಈ

ಹದಿನಾಲ್ಕು ಆಶ್ವಾಸಗಳ ಚಂಪೂಕಾವ್ಯವನ್ನು ನಿರ್ಮಿಸಿದ್ದಾನೆ; "ಜೀವಕ್ಕೆ ಶರಣ್ಯಮೊಂದೆ ನಿರ್ಮಳ ಧರ್ಮಂ" ಎಂಬ ದಿವ್ಯ ಸಂದೇಶವನ್ನು ಇದರಲ್ಲಿ ಮೊಳಗಿಸಿದ್ದಾನೆ.

**ಕಥಾಸಾರ:** (೧) ಕಚ್ಛಕಾವತಿ ದೇಶದ ವೀತಶೋಕಪುರದಲ್ಲಿ ವೈಶ್ರವಣನೆಂಬ ರಾಜ ಆಳುತ್ತಿದ್ದ. ಅವನು ಧರ್ಮಪರ, ಇಂದ್ರಿಯ ವಿಜಯಿ, ಮಹಾಪರಾಕ್ರಮಿ :

ಬಿರುದಿನ ಬೀರದ ಪೆಸರ
ಕ್ಕರಮುಂ ಪರನೃಪರ ಮೆಯ್ಯ ಪುಣ್ಗಲೆಗಳ್ ಪೋ
ಲ್ತಿರೆ ತೋಳ್ವಲಕ್ಕೆ ಪಡೆದಂ
ನರ ಶಾಸನಮುಂ ನರೇಂದ್ರ ಚೂಡಾರತ್ನಂ

ಲಕ್ಷ್ಮೀಮಹಾದೇವಿ ಅವನ ಅಗ್ರಮಹಿಷಿ. ಆ ದಂಪತಿಗಳು ಬಹಳಕಾಲ "ಇಷ್ಟ ವಿಷಯ ಸುಖಸಂತುಷ್ಟಸ್ವಾಂತ"ರಾಗಿದ್ದರೂ ಸಂತಾನಪ್ರಾಪ್ತಿಯಾಗಲಿಲ್ಲ.

ಒಮ್ಮೆ ಲಕ್ಷ್ಮಿ ತನ್ನ ಮರಿಗೆ ಗುಟುಕನ್ನಿತ್ತು ಸುಖಿಸುತ್ತಿದ್ದ ಕಳಹಂಸಿಯೊಂದನ್ನು ನೋಡಿದಾಗ ಅವಳಿಗೆ ಪುತ್ರಾಪೇಕ್ಷೆಯುಂಟಾಯಿತು. ಸಂತಾನವಿಲ್ಲದ ಬದುಕು ವ್ಯರ್ಥವೆಂದು ತನ್ನನ್ನೇ ನಿಂದಿಸಿಕೊಂಡಳು :

ಎಳೆವೆಱೆ ಬಳೆಯದ ಗಗನ
ಸ್ಥಳಿ ಸಸಿ ಬಳೆಯದ ಧರಿತ್ರಿ ಮೌಕ್ತಿಕರತ್ನಂ
ಬಳೆಯದ ಶುಕ್ತಿಕೆ ಗರ್ಭಂ
ಬಳೆಯದ ಬಾಳಕಿಯ ಬಸಿಱನರ್ಥಕಮಲ್ತೇ

ಎಂದು ಹಲುಬುತ್ತ ತಾಯ್ತನಕ್ಕಾಗಿ ಕಾತರಿಸಿ ದುಃಖಿತೆಯಾದಳು. ಬಾಡಿಹೋದ ಮಡದಿಯ ಮುಖವನ್ನು ನೋಡಿದ ವೈಶ್ರವಣ ಸಂಗತಿಯೇನೆಂದು ವಿಚಾರಿಸಿದ:

ಪಗಲ ತಿಂಗಳವೊಲೇಕೆ ಕಾಂತಿಯುಂ
ನಗೆಮೊಗಂ ಕೆದಱಿದಾನೆ ಪೊಕ್ಕ ಬೇ
ಸಗೆಯ ಕಾಡ ಕೆಱೆಯಂತೆ ನಾಡೆಯುಂ
ಬಗೆ ಕಲಂಕಿದುದಿದೇಕೆ ಕೋಮಳೇ

ಲಕ್ಷ್ಮಿಯ ನಿರ್ವೇದದ ಕಾರಣವನ್ನು ಪರಿಚಾರಿಕೆಯರು ತಿಳಿಸಿದರು. ಜಿನಾರ್ಚನೆಯಿಂದ ಪುತ್ರೋತ್ಸವವಾಗುತ್ತದೆಂದು ಅವನು ಪತ್ನಿಯನ್ನು ಸಮಾಧಾನಗೊಳಿಸಿದ. ಹರ್ಷಿತೆಯಾದ ಲಕ್ಷ್ಮಿ ಸಂತಾನಾರ್ಥಿಯಾಗಿ ಅನನ್ಯ ನಿಷ್ಠೆಯಿಂದ ಜಿನೋಪಾಸನೆ ಮಾಡಿದಳು; ಕಠಿಣ ವ್ರತನಿಯಮಗಳನ್ನು ಕೈಗೊಂಡಳು:

ಅನುಲೇಪಂ ತನುವಿಂಗೆ ಮಾಲೆ ಕಬರೀಭಾರಕ್ಕೆ ಹಾರಂ ಘನ
ಸ್ತನ ಭಾರಕ್ಕತಿಭಾರನೆಂಬ ಸುಕುಮಾರ ಶ್ರೀಯನಾಳ್ದಾ ನಿತಂ
ಬಿನಿ ಭೂಶಯ್ಯೆಗೆ ಜಾಗರಕ್ಕನಶನಕ್ಕೇಕಾಂತರಕ್ಕೇಕ ಭು
ಕ್ತಿ ನಿಯಾಮಕ್ಕೊಡಲಂ ನಿಯೋಜಿಸಿದಳಾಶಾಶಕ್ತಿ ಸಾಮಾನ್ಯಮೇ

ಕಾಲಕ್ರಮದಲ್ಲಿ ಲಕ್ಷ್ಮಿಗೆ ಪುತ್ರಜನನವಾಯಿತು. "ಇವಳೀ ಸಂಬಂಧದಿಂದಂ ಸಫಳಮೆನಿಸಿದತ್ತೆನ್ನ ಸಂಸಾರಂ" ಎಂದು ವೈಶ್ರವಣ ಹಿಗ್ಗಿದ. ಮಗುವಿಗೆ ಶ್ರೀಧರನೆಂದು ನಾಮಕರಣ ಮಾಡಲಾಯಿತು. ಶ್ರೀಧರ ಬೆಳೆದು ಯೌವನಸ್ಥನಾದ ಮೇಲೆ ಯುವರಾಜ ಪದವಿಯಲ್ಲಿ ಪ್ರತಿಷ್ಠಿತನಾದ.

(೨) ಅದ್ವಿತೀಯ ವಿಭವದಿಂದ, ನಾನಾ ವಿನೋದವಿಲಾಸ ಭೋಗಗಳಲ್ಲಿ ಮುಳುಗಿ ರಾಜ್ಯವಾಳುತ್ತಿದ್ದ ವೈಶ್ರವಣ ಒಮ್ಮೆ ಶರತ್ಕಾಲದಲ್ಲಿ ಚತುರಂಗಬಲದ ಕ್ರೀಡೆಯನ್ನು ನೋಡಲು ಬಯಸಿದ; "ಚತುರಂಗಬಳ ಪ್ರಬಳ ಭಾರಭಗ್ನ ಭೋಗೀಂದ್ರ ಫಣಾ ಸಹಸ್ರ ಫೂತ್ಕಾರಮಂ" ಕೇಳಲು ಉತ್ಕಂಠಿತನಾದ.

ಸಾಗರ ಮೇರೆ ಮೀರಿದಂತೆ ಚತುರಂಗ ಸೈನ್ಯ ಬಂದು ಅರಮನೆಯ ಮುಂದೆ ನೆರೆಯಿತು; ಅನಂತರ ಅದು ಅರಸನ ಅಪ್ಪಣೆಯಂತೆ ಪುರದ ಹೊರಭಾಗಕ್ಕೆ ನಡೆಯಿತು. ವೈಶ್ರವಣ ಅಶ್ವಾರೋಹಿಯಾಗಿ ಹೊರಟ. ಅವನು ಬಲವನ್ನೆಲ್ಲ ನೋಡಿ ಮರಳಿ ನಿವಾಸಕ್ಕೆ ಹಿಂದಿರುಗಿದಾಗ, ರಾಜಾಂಗಣದಲ್ಲಿ ವಿಸ್ಮಯಾವಹ ದೃಶ್ಯವೊಂದು ಗೋಚರಿಸಿತು: ಆಲದ ಮರ ವೊಂದು ಸಿಡಿಲಿನ ಆಘಾತಕ್ಕೆ ಬೇರುಡಿದು ಬಿದ್ದಿದೆ—

ಸಿಡಿಲೆಂಬ ಜವನ ಕೊಡಲಿಯ
ಕಡುವೊಯ್ಲಿಂ ನೆಗೆದ ಬೇರ್ಗಳೊಡನೆ ನೆಲಂ ಬಾ
ಯ್ವಿಡೆ ಬಿಟ್ಟು ಕೆಡೆವ ತೆಱದಿಂ
ಕೆಡೆದಾಲಮನಿದಿರೊಳವನಿಪಾಲಂ ಕಂಡಂ

ಅದನ್ನು ಕಂಡು,

ತಲೆಯೊಳ್ತಳ್ವೊಯ್ಯೆ ಬೇರ್ಗಳ್ ಫಣಿಪತಿ ತಲೆ ಮುಟ್ಟಿತ್ತಿದಂ ಕುತ್ತೆ ಸುತ್ತಂ
ಕೆಲಗೊಂಬಾಶಾಗಜಂ ತಾಗಿದುವೆಡೆಗುಡದಾಕಾಶಮಂ ತೀವೆ ತೀವ್ರಾ
ನಿಲನಾಟಂದೊತ್ತಿದಂ ತಿಗ್ಮರುಚಿಕರ ಸಹಸ್ರಂಗಳಿಂ ಪೊಯ್ದುನಡ್ಡಂ
ನಿಲೆ ತೇರ್ಗಂತಲ್ಲದಂದೀ ತರು ಕೆಡೆವುದೆ ಸೌದಾಮಿನೀಪಾತದಿಂದಂ

ಎಂದು ಅವನು ಅಡಿಗಡಿಗೆ ತಲೆದೂಗಿದ. "ವಿಸ್ಮಯಮೆ ತನಗೆ ವೈರಾಗ್ಯ ರಸಕ್ಕೆ ಸೇತುವಾಗ" ದೇಹದ ಅನಿತ್ಯತೆಯನ್ನು ಮನಗಂಡ. "ಕಾಲವ್ಯಾಳದ್ವಿರದಕ್ಕೆ ನರಕಳೇಬರ ಜರತ್ತೃಣ ಗ್ರಾಸಮಾತ್ರಮಾವುದೊ ಗಹನಂ'' ಎಂದು ಚಿಂತಿಸಿ ಸಂಸಾರ ಪರಾಙ್ಮುಖನಾದ. ಆಗ "ಕುತ್ತದ ಪರಮ ಪಾಪದ ಬಿತ್ತು ಪರಾಭವದ ಬೆಳಸು ಪಸಿದ ಕೃತಾಂತಂಗೆತ್ತಿದ ಭೋಗಂ ತನು" ಎಂದೂ "ದೇಹಮುನಾತ್ಮಂ ಬಿಟ್ಟು ಪಿಂಗದನ್ನಂ ಶುಚಿಯೇ"

ಎಂದೂ ತನಗೆ ತಾನೆ ಹೇಳಿಕೊಂಡ. ಯಾವುದು ಸುಖವೆಂದು ಕೊಳ್ಳುತ್ತೇವೊ ಆ ವಸ್ತುವೆ ದುಃಖಹೇತುವೆಂಬ ವಿವೇಕ ಅವನಲ್ಲಿ ಉದಿಸಿತು. ಕಡೆಗೆ "ಭಾವಿಪೊಡಸಾರಮೀ ಸಂಸಾರಂ" ಎಂದು ನಿರ್ಣಯಿಸಿ, ''ಸಾಧಿಸುವೆನನಾಮಯಮಂ ಪ್ರಿಯಮನ ಮಳರತ್ನತ್ರಯಮಂ'' ಎಂದು ನಿರ್ಧರಿಸಿದ.

ಅನಂತರ ವೈಶ್ರವಣ ''ತನ್ನ ವೈರಾಗ್ಯರಸಕ್ಕೆ ಸೇತುಗಟ್ಟು ವಂತೆ'' ಶ್ರೀಧರನಿಗೆ ಪಟ್ಟಗಟ್ಟಿ "ಭಾರವಾಹಕಂ ಪೊಱೆಯ ನಿೞಿಪಿದಂತೆ'' ನಿರಾಕುಲಚಿತ್ತನಾಗಿ ತಪೋವನಾಭಿಮುಖ ನಾದ; ಎಲ್ಲರನ್ನೂ ಬೀಳ್ಕೊಟ್ಟು ಜಿನಾಗಮಪ್ರಧಾನರಾದ ಶ್ರೀ ನಾಗಭಟ್ಟಾರರಿದ್ದ ಶ್ರೀ ಪರ್ವತದತ್ತ ಪ್ರಯಾಣ ಮಾಡಿದ. ಜಿನಭವನಪಾವನವಾದ ಶ್ರೀಶೈಲವನ್ನು ಸೇರಿ ಅಲ್ಲಿ ''ಅಪವರ್ಗ ಲಕ್ಷ್ಮಿಯ ಮನೆಮಂ ಪುಗುವಂತೆ" ಚೈತ್ಯಗೃಹವನ್ನು ಹೊಕ್ಕು ಭಕ್ತಿಯಿಂದ ಜಿನಸ್ತುತಿಗೈದ :

ಸಿಂಗದ ಮೂರ್ದನಿ ಮದಮಾ
ತಂಗಮನೞ್ಜಿಸುವವೊಲ್ ನಿಜಪ್ರತಿಬಿಂಬಂ
ಪಿಂಗದೆ ಮನದೊಳ್ನಿಂದಿರೆ
ಪಿಂಗಿಸುವುದು ಜನನಮರಣದುಃಖಮನರ್ಹಾ

ಬಳಿಕ ನಾಗಭಟ್ಟಾರಕರನ್ನು ಪೂಜಿಸಿ ಅವರ ಹರಕೆಯನ್ನು ಕೈಕೊಂಡ. ರಾಜನ ಆಗಮನ ವೃತ್ತಾಂತವನ್ನರಿತ ಮುನೀಶ್ವರ "ಭಾವಿ ಜಿನನಪ್ಪ ಜೀವರ್ಕ್ಕಾವುದು ವಿಸ್ಮಯಮೊ'' ಎಂದು ಬಗೆದು

ಕಿಡುವಿಂದ್ರಿಯಸೌಖ್ಯಮನೇಂ
ಪಿಡಿವರೆ ನಿಮ್ಮಂದಿಗರ್ ವಿವೇಕಿಗಳೆಂದುಂ

ಕಿಡದ ಪರಮಾತ್ಮ ಸುಖಮನೆ
ಪಿಡಿವರಬೇನೊನಲಿಯುಂತೆ ಪಿಡಿವರೆ ಕಪಮುಂ

ಎಂದು ನುಡಿದ. ಆ ತಪೋಸಿಧಿಯ ಸನ್ನಿಧಿಯಲ್ಲಿ ವೈಶ್ರವಣ ಉಗ್ರತಪೋನಿರತನಾಗಿದ್ದು, ಕಡೆಗೆ ಸಮಾಧಿಯಲ್ಲಿ ಶರೀರವನ್ನು ಕಳಚಿ ಅಪರಾಜಿತ ವಿಮಾನದಲ್ಲಿ ಅಹಮಿಂದ್ರನಾಗಿ ಹುಟ್ಟಿದ. ಅಲ್ಲಿ ಆ ದಿವಿಜನಿಗೆ ಪರಮಾಯು ತುಂಬಿತು; ಬಳಿಕ ಚರಮದೇಹಧಾರಣಕ್ಕಾಗಿ ಧರೆಗೆ ಅವತರಿಸುತ್ತಾನೆಂದು ಅವಧಿಜ್ಞಾನದಿಂದ ತಿಳಿದ ಸೌಧರ್ಮೇಂದ್ರ ಆನಂದಿಸಿದ.

(೩) ಇತ್ತ ಅಂಗವಿಷಯದ ಮಿಥಿಳಾಪುರದಲ್ಲಿ ಕುಂಭನೆಂಬ ದೊರೆ ಆಳುತ್ತಿದ್ದ; ಅವನ ಪತ್ನಿ ಪ್ರಭಾವತಿ. ಅವಳೇ ಭಾವೀ ಜಿನನ ಮಾತೆ. ಜಿನಸಂಭವಕ್ಕೆ ಆರುತಿಂಗಳ ಮೊದಲೆ ಗರ್ಭಾವತರಣಕಲ್ಯಾಣಕ್ಕೆ ಸಿದ್ಧತೆಗಳಾದುವು. ಪ್ರಭಾವತಿ ಶುಭಸ್ವಪ್ನಗಳನ್ನು ಕಂಡಳು. ವೈಶ್ರವಣಚರನಾದ ಅಹಮಿಂದ್ರ ಬಂದು ಅವಳ ಗರ್ಭದಲ್ಲಿ ನೆಲಸಿದ. ನವಮಾಸ ತುಂಬಲು ಪ್ರಭಾವತಿ "ಮಲ್ಲಿನಾಥ ಜಿನನಂ ಪೆತ್ತಳ್ ಜಗನ್ನಾಥನಂ". ಅದನ್ನರಿತ ಸೌಧರ್ಮೇಂದ್ರ ಜನ್ಮಾಭಿಷೇಕ ಕಲ್ಯಾಣವನ್ನು ನೆರವೇರಿಸಿ ಆನಂದನೃತ್ಯ ಮಾಡಿದ.

ಶಿಶು ಜಿನ ತಾಯ ಮನವನ್ನು ಸೂರೆಗೊಳ್ಳುತ್ತ ಬೆಳೆದ. ಬಾಲ್ಯ ಕಳೆದು ಕೌಮಾರ್ಯೋದಯವಾಯಿತು. ಅವನಿಗೆ ತಂದೆತಾಯಿಗಳು ಮದುವೆ ಮಾಡಬೇಕೆಂದು ಯೋಚಿಸಿದರು. ಆದರೆ ಮಲ್ಲಿನಾಥನ ಸ್ವಭಾವ ಬೇರೆ:

ನನೆಯಂಬು ನಾಂಟಿದಂತಿರೆ
ಮನದೊಡವುಟ್ಟಿತ್ತು ವಜ್ರಕವಚಮೆನಿಪ್ಪೀ

ಜಿನಪತಿ ದಂಪತಿಯೆನಿಪನೆ
ಧನಕ್ಕೆ ಮಾಣಿಕ್ಯ ದೀಪಮೇನೆಱಗುಗುಮೇ

ವಿವಾಹ ಸಿದ್ಧತೆಗಳೆಲ್ಲ ನಡೆದುವು. ವಿವಾಹ ಮಂಟಪವನ್ನು ಕಂಡ ಮಲ್ಲಿನಾಥನಿಗೆ ಅವಧಿಬೋಧದಿಂದ ಅಪರಾಜಿತ ವಿಮಾನ ನೆನಪಾಗಿ ನಿರ್ವೇಗವುಂಟಾಯಿತು; ಸಂಸಾರಸುಖಗಳ ಬಗ್ಗೆ ಜುಗುಪ್ಸೆ ಹುಟ್ಟಿತು :

ಜವನೇನಟ್ಟುಮವಚ್ಟನೇ ಪರಿದು ಮೇಣ್ಕಾಲಂ ಜವಂಗೆಟ್ಟನೇ
ಕಿವಿಕಣ್ ನಾಲಗೆ ಮೂಗು ಮೆಯ್ ಜವಜವಕ್ಕೇಂ ಸಲ್ಲವೇ
ಯೌವನಂ
ತವದೇ ಕುತ್ತದ ಬಿತ್ತನೇಂ ಪುರಿದರೇ ಕೇಡಿಂಗೆ ಕೇಡಾಯ್ತೆ ಮಾ
ನವರೇನೆಂದು ಜಡಾತ್ಮರೈಹಿಕ ಸುಖವ್ಯಾಮೋಹವಂ ಮಾಡುವರ್

ಎಂದು ಅಚ್ಚರಿಪಟ್ಟು "ಅಂತಕಂಗಿದಿರಾಂತವನಂ ತವೆ ಮೋದಿ....ನೆರೆವೆಂ ಜಯಾಂಗನೆಯೊಳೀವೆನೊ ಮುಕ್ತಿನ ಪೆಣ್ಣನೆಂದು ತಾಂ ತನ್ನನೆ ತಾನೆ ಸಾಧಿಸುವ ಧೀರತೆಯಂ ತಳೆದಂ ಕುಮಾರಕಂ "

ಹೀಗೆ ನಿರ್ಧರಿಸಿದ ಮಲ್ಲಿನಾಥ ಸಂಸಾರದಿಂದ ನಿಷ್ಕ್ರಮಿಸಿ ಜಿನದೀಕ್ಷೆ ವಹಿಸಿದ. ಪರಿನಿಷ್ಕ್ರಮಣೋತ್ಸವವಾಯಿತು. ಧ್ಯಾನಶೀಲನಾದ ಮಲ್ಲಿನಾಥನಿಗೆ ನಿರ್ವಾತ ಪ್ರದೀಪೋಜ್ವಲ ವಾದ ಮನಃಪರ್ಯಯಜ್ಞಾನ ಹುಟ್ಟಿತು. ಅನಂತರ ಪಂಚಾಶ್ಚರ್ಯ ಗಳಾದುವು. ಮುನಿಯ ತಪಃಪ್ರಭಾವದಿಂದ ವನವೆಲ್ಲ ನಿರ್ವೈರವಾಯಿತು.

ತಪೋಮಗ್ನನಾಗಿದ್ದ ಮಲ್ಲಿನಾಥನನ್ನು ಚಂಚಲಗೊಳಿಸಲು ಬಂದು ದಾಳಿಮಾಡಿದ ಮನ್ಮಥ ತನ್ನ ಕೋಪಾಗ್ನಿಯಿಂದ

ಉರಿದುಹೋದ; ರತಿಯೂ ಶೋಕಾರ್ತಳಾಗಿ ಪ್ರಾಣ ನೀಗಿದಳು.

ತನ್ನ ತಪವನ್ನು ಮುಂದುವರಿಸಿದ ಮಲ್ಲಿನಾಥನಿಗೆ ಕೇವಲ ಜ್ಞಾನೋದಯವಾಯಿತು. ಬಳಿಕ ಇಂದ್ರಾಜ್ಞೆಯಂತೆ ಸಮವಸರಣ ಮಂಟಪ ನಿರ್ಮಿತವಾಯಿತು. ನಿರ್ಭರ ಭಕ್ತಿಯಿಂದ ಇಂದ್ರ ಮಲ್ಲಿಭಟ್ಟಾರಕನನ್ನು ಪೂಜಿಸಿದ. ಲೋಕದಲ್ಲಿ ಧರ್ಮಾಮೃತವನ್ನು ವರ್ಷಿಸಿದ ಬಳಿಕ ಮಲ್ಲಿನಾಥ ಸಮ್ಮೇದ ಶಿಖರದಲ್ಲಿ ಪ್ರತಿಮಾಯೋಗಸ್ಥನಾಗಿ ಮುಕ್ತಿ ವಧುವನ್ನು ಕೈಹಿಡಿದ. ದೇವತೆಗಳು ಪರಿನಿರ್ವಾಣ ಕಲ್ಯಾಣವನ್ನು ಆಚರಿಸಿದರು; ಜಿನಸ್ತೋತ್ರಗೈದರು :

ಮನೋಭವಜನ್ಮಭೂಮಿ ಮನಮೆಂದು ನಿರ್ಬಂಧದಿಂ
ಮನಕ್ಕೆ ಲಯಮಂ ವಿನಿರ್ಮಿಸಿ ಮನೋಭವಂಗಾಶ್ರಯಂ
ವಿನಷ್ಟಮೆನಿಸಿತ್ತು ಮತ್ತೆ ಪೆಱರಾಪ್ತರೇನೀಯರೇ
ಮನೋಭವನುಮಂ ಮಹಾಪುರುಷ ಮಲ್ಲಿಭಟ್ಟಾರಕಾ

**ಕಥೆಯ ಆಕರ :** 'ಮಲ್ಲಿನಾಥಪುರಾಣ'ದ ಕತೆ ವಾಸ್ತವವಾಗಿ ಪ್ರಮಾಣದಲ್ಲಿ ಬಹಳ ಕಿರಿದು; ಇದಕ್ಕೆ ಮೂಲ ಗುಣಭದ್ರಾಚಾರ್ಯರ 'ಉತ್ತರಪುರಾಣ'. ಅಲ್ಲಿ ಈ ಕತೆ ಕೇವಲ ೧೨೫ ಶ್ಲೋಕಗಳಲ್ಲಿ ನಿರೂಪಿತವಾಗಿದೆ. (ಚಾವುಂಡರಾಯ ಪುರಾಣದಲ್ಲಿ ಇದು ಸುಮಾರು ನಲವತ್ತೈದು ಪಂಕ್ತಿಗಳಷ್ಟು). ಅವರಲ್ಲಿಯೂ ಮಲ್ಲಿನಾಥ ಜಿನನಿಗೆ ನೇರವಾಗಿ ಸಂಬಂಧಿಸಿದ ಆಖ್ಯಾನ ೬೬ ಶ್ಲೋಕಗಳಿಗಷ್ಟೆ ಪರಿಮಿತವಾಗಿದೆ. ವೈಶ್ರವಣನೆಂಬ ದೊರೆ ಒಮ್ಮೆ ಸಿಡಿಲಿನಿಂದ ಕೆಡೆದು ಬಿದ್ದಿದ್ದ ಆಲದ ಮರವೊಂದನ್ನು ಕಂಡು ವೈರಾಗ್ಯೋನ್ಮುಖನಾಗಿ, ತಪಶ್ಚರಣೆ

ಯಿಂದ ಮೋಕ್ಷಕ್ಕೆ ಸಂದುದು ಇದರ ಸಾರಾಂಶ. ಆ ರಾಜ ಆಲದಮರವನ್ನು ನೋಡಿದ್ದು ಕಥೆಯ ಹೃತ್ಕೇಂದ್ರ. ಈ ಪ್ರಸಂಗ 'ಉತ್ತರ ಪುರಾಣ'ದಲ್ಲಿ ಹೀಗೆ ಬರುತ್ತದೆ:

ತತ್ರ ಶಾಖೋಪಶಾಖಾಃ ಪ್ರಸಾರ್ಯೇವ ನೃಪೋ ಮಹಾನ್
ಅವಗಾಹ್ಯ ಮಹೀಂ ತಸ್ಥೌ ನ್ಯಗ್ರೋಧಃ ಸೇವಿತೋ ದ್ವಿಜೈಃ
ತಂ ವಿಲೋಕ್ಯ ಮಹೀಪಾಲಃ ಪಶ್ಯ ಪಶ್ಯಾಸ್ಯ ವಿಸ್ತೃತಿಂ
ತುಂಗತ್ವಂ ಬದ್ಧಮೂಲತ್ವಂ ವಹನ್ನಸ್ವೇತಿ ಮಾಮಯಂ
ದರ್ಶಯನ್ನಿತಿ ಸಾಶ್ಚರ್ಯಂ ಪ್ರಿಯಾಣಾಂ ಪಾರ್ಶ್ವವರ್ತಿನಾಂ
ಗತ್ವಾ ವನಾಂತರೇ ಭ್ರಾಂತ್ವಾ ತೇನೈವಾಯನ್ಪುನಃ ಪಥಾಃ
ಆಮೂಲಾದ್ಭಸಿತಂ ವೀಕ್ಷ್ಯ ವಜ್ರಪಾತೇನ ತಂ ವಟಂ
ಕಸ್ಯಾತ್ರ ಬದ್ಧಮೂಲತ್ವಂ ಕಸ್ಯ ಕಾ ವಾತ್ರ ವಿಸ್ತೃತಿಃ
ಕಸ್ಯ ವಾ ತುಂಗತಾ ನಾಮ ಯದ್ಯಸ್ಯಾಪೀದೃಶೀ ಗತಿಃ
ಇತಿ ಚಿಂತಾಂ ಸಮಾಪನ್ನಃ............*

---

* "ಅಲ್ಲಿ ದ್ವಿಜರಿಂದ ಸೇವಿಸಲ್ಪಟ್ಟ ಮಹಾರಾಜನಂತೆ, ಪಕ್ಷಿಗಳಿಂದ ಸೇವಿಸಲ್ಪಟ್ಟ ಆಲದಮರವು ತನ್ನ ಶಾಖೋಪಶಾಖೆಗಳನ್ನು ಹರಡಿ ಭೂಮಿಯನ್ನು ಹೊಕ್ಕಿದ್ದಿತು. ಆ ಮರವನ್ನು ನೋಡಿ ದೊರೆಯು 'ಈ ಮರದ ವಿಸ್ತಾರವನ್ನು ನೋಡು, ನೋಡು. ಔನ್ನತ್ಯವನ್ನೂ ಚೆನ್ನಾಗಿ ಬೇರುಬಿಟ್ಟಿರುವಿಕೆಯನ್ನೂ ಹೊಂದಿರುವ ಈ ಮರವು ನನ್ನನ್ನು ಅನುಸರಿಸುತ್ತದೆ' ಎಂದು ಆಶ್ಚರ್ಯಯುತವಾಗಿರುವಂತೆ ಸಮೀಪದಲ್ಲಿರುವ ಪ್ರಿಯಜನಗಳಿಗೆ ತೋರಿಸುವವನಾಗಿ ಹೋಗಿ ವನಮಧ್ಯದಲ್ಲಿ ಭ್ರಮಣ ಮಾಡಿ ಮತ್ತೆ ಅದೇ ಮಾರ್ಗದಿಂದ ಬರುವವನಾಗಿ ಸಿಡಿಲಿನ ಪತನದಿಂದ ಬುಡದಿಂದ ತುದಿಯವರೆಗೆ ಸುಟ್ಟು ಬೂದಿಯಾಗಿರುವ ಆ ಆಲದ ಮರವನ್ನು ನೋಡಿ 'ಈ ಮರಕ್ಕೂ ಇಂತಹ ಗತಿಯಾದರೆ ಇಲ್ಲಿ ಯಾವುದರ ಚೆನ್ನಾಗಿ ಬೇರು ಬಿಟ್ಟಿರುವಿಕೆಯಿದೆ? ಇಲ್ಲಿ ಯಾವುದರ ವಿಸ್ತಾರವಿದೆ? ಯಾವುದರ ಔನ್ನತ್ಯವೆಂಬುದಿದೆ' ಈ ರೀತಿಯಾಗಿ ಚಿಂತೆಯನ್ನು ಹೊಂದಿದನು."

ನಾಗಚಂದ್ರನ ಕಾವ್ಯದ ತಿರುಳೂ ಇಷ್ಟೆ. ಆದರೆ ಈ ವೈರಾಗ್ಯಚೋದಕ ಸನ್ನಿವೇಶದಲ್ಲಿ ಅವನಿಂದ ಒಂದು ಸಣ್ಣ ಲೋಪವಾಗಿದೆ. ಮೂಲನಲ್ಲಿ ವೈಶ್ರವಣ ಆಲದ ಮರದ ಮಹಾದ್ಭುತಸ್ವರೂಪವನ್ನು ನೋಡಿ ಬೆರಗುವಟ್ಟು ಹೋಗುತ್ತಾನೆ; ಮತ್ತೆ ಹಿಂದಿರುಗುವಾಗ ಅದು ನೆಲಕ್ಕೊರಗಿರುವುದನ್ನು ಕಂಡು ನೂರ್ಮಡಿ ವಿಸ್ಮಯವನ್ನನುಭವಿಸುತ್ತಾನೆ. ನಾಗಚಂದ್ರನಲ್ಲಿ ಆ ಮರದ ಮೊದಲಿನ ಚಿತ್ರ ಬರುವುದಿಲ್ಲ; ಆದರ ಪತನದ ಚಿತ್ರವನ್ನಷ್ಟೆ ಅವನು ಕೊಡುತ್ತಾನೆ. ಇದು ನಾಟಕೀಯವಾಗಿ ತೋರಿದರೂ, ಮೂಲದಲ್ಲಿ ತೀವ್ರ ವಿಸ್ಮಯೋದ್ರೇಕಕ್ಕಿರುವ ಅವಕಾಶ ಇಲ್ಲಿ ಕಡಮೆಯಾಗಿದೆ.

ಮೂಲದಲ್ಲಿ ಬಲದೇವ ವಾಸುದೇವ ಪ್ರತಿವಾಸುದೇವರ ಕಥೆ ಮಲ್ಲಿನಾಥನ ಕಥೆಗೆ ಸೇರಿಕೊಂಡಿದೆ. ಅದನ್ನು ನಾಗಚಂದ್ರ ಕೈ ಬಿಟ್ಟು, ತನ್ಮೂಲಕ 'ಪುರಾಣ'ದ ಒಂದು ಅಂಗವನ್ನು ವರ್ಜಿಸಿ, ತನ್ನ ಕೃತಿ ಆದಷ್ಟುಮಟ್ಟಿಗೆ ಕಾವ್ಯವಾಗುವಂತೆ ಮಾಡಲು ಪ್ರಯತ್ನಿಸಿದ್ದಾನೆ ಭವಾವಳಿಯ ಸಿಕ್ಕು ಗೋಜುಗಳು ಎರಡು ಕಡೆಯೂ ಇಲ್ಲ.

ವರ್ಣನೆಗಳು: ಅತಿ ಹ್ರಸ್ವವಾದ, ಮುಷ್ಟಿಗ್ರಾಹ್ಯವಾದ ಮಲ್ಲಿನಾಥನ ಕತೆಯನ್ನು ನಾಗಚಂದ್ರ ಚತುರ್ದಶಾಶ್ವಾಸಗಳ ವಿಸ್ತಾರಕ್ಕೆ ಅಳವಡಿಸಿದ್ದಾನೆ. ಇದರಿಂದ "ನೂಲು ಸ್ವಲ್ಪ, ಮಗ್ಗ ದೊಡ್ಡದು; ವಸ್ತ್ರ ಜಾಳಾಗಿದೆ" ಎಂಬ ಟೀಕೆಗೆ ಆಸ್ಪದವಾಗಿದೆ. ಕಿರುಗತೆಯನ್ನು ಹಿಗ್ಗಲಿಸುವಾಗ ಅವನು ಕಾವ್ಯದ ತುಂಬ ವರ್ಣನೆಗಳನ್ನು ತುಂಬುವುದು ಅನಿವಾರ್ಯವಾಯಿತು. ಎಂತಲೇ, 'ಮಲ್ಲಿನಾಥಪುರಾಣ'ದಲ್ಲಿ ಕತೆಯೊಂದು ಹನಿ, ಇಡೀ ಕಾವ್ಯ ವರ್ಣನೆಗಳ ಖನಿ. ಇಲ್ಲಿ ನಿಡಿದಾದ ಕತೆಯಿಲ್ಲ,

ಪಾತ್ರಗಳ ಕಂಡರಣೆಯಿಲ್ಲ, ಸನ್ನಿವೇಶ ನಿರ್ಮಿತಿಯಿಲ್ಲ; ಬರಿಯ ವರ್ಣನೆಗಳ ಸುದೀರ್ಘಸರಣಿಯಿದೆ. ವರ್ಣನೆಗಳೆ ಇಷ್ಟರ ಮಟ್ಟಿಗೆ ಇಡಿಕಿರಿದಿರುವ ಕಾವ್ಯ ಕನ್ನಡದಲ್ಲಿ ಮತ್ತೊಂದಿಲ್ಲ. ಈ ವರ್ಣನಾಬಾಹುಳ್ಯದಲ್ಲೆ ನಾಗಚಂದ್ರನ ಪ್ರತಿಭೆಯನು ಸಂದರ್ಶಿಸಬೇಕಾಗಿದೆ.

ತಾನು "ಪ್ರಸಿದ್ಧ ಕವಿಪದ್ಧತಿಯಿಂ" ಈ ಕಾವ್ಯವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ, ನಾಗಚಂದ್ರ. ಸತ್ಯವಾದ ಮಾತು. ಅವನು ಕವಿಸಮಯಗಳ ಬೆನ್ನುಹತ್ತಿದ್ದಾನೆ; ಪ್ರಸಿದ್ಧ ಪೂರ್ವಕವಿಗಳನ್ನು ಅನುಸರಿಸಿದ್ದಾನೆ; ಪರಂಪರಾಯಾತ ವರ್ಣನ ರೀತಿಗೆ ಮನಸೋತಿದ್ದಾನೆ. ತನ್ನ ಕೃತಿ 'ಪುರಾಣ'ವಾಗಬೇಕು, ಜಿನಧರ್ಮಕೋಶವಾಗಬೇಕು ಎಂಬ ಬಯಕೆ ಸಹಜವಾಗಿಯೆ ಅವನಿಗುಂಟು. "ವೀತರಾಗನ ಚರಿತದೊಳಳವಡಿಪ ಸಕಲ ರಸಮಂ" ಕತೆ ಹೇಳಬೇಕೆಂಬ ಅನುಚಿತವಾದ ಆವೇಶ ಬೇರೆ ಅವನನ್ನು ಕಾಡುತ್ತಿದೆ. ಈ ಪೂರ್ವಗ್ರಹಪೀಡೆ ಅವನನ್ನು ಸಾಂಪ್ರದಾಯಿಕ ಶೃಂಗಾರ ನಿರೂಪಣೆಗೆ ಬಲಾತ್ಕರಿಸಿದೆ. ಕವಿಸಮಯಕ್ಕೂ ಜಿನಸಮಯಕ್ಕೂ ವಿರೋಧವೆಂಬುದನ್ನು ನಾಗಚಂದ್ರ ಅರಿತುಕೊಳ್ಳದುದು ವಿಷಾದನೀಯವೆನ್ನಬೇಕು.

'ಮಲ್ಲಿನಾಥಪುರಾಣದ'ದ ವರ್ಣನೆಗಳು ಬಹುಪಾಲು ಸಂಪ್ರದಾಯನಿಬದ್ಧವಾಗಿದ್ದರೂ, ನಾಗಚಂದ್ರನ ಪ್ರತಿಭೆ ಸ್ವೋಪಜ್ಞತೆಗಳನ್ನು ಬಿಂಬಿಸುವ ವರ್ಣನೆಗಳು ಇಲ್ಲಿ ಬೇಕಾದಷ್ಟಿವೆ. ಇವುಗಳಲ್ಲಿ ಕೆಲವಂತೂ ಹೃದಯಂಗಮವಾದ, ಸತ್ವಪೂರ್ಣವಾದ, ಶ್ರೇಷ್ಠವಾದ ಭಾವಗೀತಗಳಾಗಿ ಪರಿಣಮಿಸಿವೆ. ನಾಗಚಂದ್ರನ ವರ್ಣನೆಗಳನ್ನು ಚಮತ್ಕಾರರಮ್ಯವಾದ

ವರ್ಣನೆಗಳು ಹಾಗೂ ಪ್ರತಿಭಾಪೂರ್ವಕವಾದ ವರ್ಣನೆಗಳು ಎಂದು ಸ್ಥೂಲವಾಗಿ ಎರಡು ವರ್ಗ ಮಾಡಿಕೊಳ್ಳಬಹುದು. ಕೆಲವನ್ನಷ್ಟೆ ಇಲ್ಲಿ ಗಮನಿಸಲಾಗುತ್ತದೆ. (ಹಿಂದೆ ಕೆಲವು ಉದಾಹೃತವಾಗಿವೆ).

ವೇಶ್ಯಾವಾಟಿಕೆಯನ್ನು ವರ್ಣಿಸುವಾಗ ಅಲ್ಲಿನ ಸ್ತ್ರೀಯರ ಲಾವಣ್ಯವನ್ನು ನಾಗಚಂದ್ರ ಧ್ವನಿಸುವುದು ಹೀಗೆ:

ಆವಂ ಸ್ವರ್ಗಾಪವರ್ಗಕ್ಕೆಳಸುವನವನಂ ಗಂಡುದೊತ್ತಾಳ್ವರಾವಂ
ದೇವವ್ರತಖ್ಯಾತಿಯನವನನವಲ್ಮಾಟ್ಟಿಪ್ಪಿದೆಂದಾ ಪುರಸ್ತ್ರೀ
ಭ್ರೂವಿಕ್ಷೇಪಕ್ಕೆ ಸೇನಾಪತಿಪದವಿಯನಿತ್ತಂ ಮನೋಜಾತನಾಟಂ
ದಾ ವೇಶ್ಯಾವಾಟದೊಳ್ ಧೂರ್ಜಟಿಯ ನೊಸಲ ಕಣ್ಣಂ
ಸ್ಮರಂ ಸಂದೆವೊಯ್ದಂ

ಮಾವು-ಮಲ್ಲಿಗೆಗಳ ಮದುವೆಯನ್ನು ಕವಿ ಸಮೀಕರಣಾತ್ಮಕವಾದ ರೀತಿಯಲ್ಲಿ ಬಣ್ಣಿಸುತ್ತಾನೆ:

ಕಳಶಂ ಪದ್ಮಾಕರಂ ಕನ್ನಡಿ ಹಿಮರುಚಿ ಕಾಮಾಗ್ನಿ ಹೋಮಾಗ್ನಿ
ಪುಂಸ್ಕೋ
ಕಿಳನಾದಂ ವೇದಮಂತ್ರಂ ಕುಡಿ ಗುಡಿ ಮಧು ಮೌಹೂರ್ತಿಕಂ
ಪೂತ ವಲ್ಲೀ
ಕುಳಮೆಲ್ಲಂ ನಿಬ್ಬಣಂ ಬಂದಬಲೆಯರಿನೆ ಚೂತಂಗಮೀ
ಮಲ್ಲಿಕಾಕೋ
ಮಳೆಗಂ ಕೊಂಡಾಡಿ ಕೈನೀರೆಱೆದನನುಪಮ ಲಾವಣ್ಯ
ಪುಣ್ಯಾಂಬುವಿಂದಂ*

---

* ಪಂಪರಾಮಾಯಣದಲ್ಲಿ ಬರುವ ರಾಮ-ಸೀತೆಯರ ಪಾಣಿಗ್ರಹಣದ ವರ್ಣನೆಯನ್ನು ಹೋಲಿಸಬಹುದು; ಅದರ ಸೊಗಸೇ ಬೇರೆ.

ಮಿಂದು ಹೊರಬಂದ ವನಿತೆಯರ ಕೇಶರಾಶಿಯಿಂದ ನೀರಿಳಿಯುವ ಚಿತ್ರ ಮನೋಹರವಾಗಿ ಮೂಡಿದೆ :

ಮೃಗಲೋಚನೆಯರ್ಸಲಿಲಾ
ವಗಾಹಮಂ ಮಾಣ್ದು ಪೊಱಗೆ ನಿಲೆ ಕಟ್ಟಿಲೆ ತಾ
ರಗೆಯನುಗುಳ್ದಪ್ಪುವೆಂಬಿನ
ಮುಗುತಂದುವು ಸಲಿಲಬಿಂದುಗಳ್ಸೋರ್ಮುಡಿಯಿಂ

ಲಕ್ಷ್ಮೀಮಹಾದೇವಿಯ ಪುತ್ರದೋಹದದ ವರ್ಣನೆ ಸಹಜವಾಗಿ, ಚಿತ್ತಸ್ಪರ್ಶಿಯಾಗಿ ಬರುತ್ತದೆ. ಅವಳು " ಋತುಸಮಯಮೆನಗಿದಸ್ಪೃಶ್ಯತೆಯಂ ಸಮನಿಸಲೆ ಹೇತುವಾದತ್ತಾದಂ ಸುತಹೇತುವಾದುದಿಲ್ಲ " ಎಂದು ವಿಹ್ವಲೆಯಾಗುತ್ತಾಳೆ;

ಅರಿಸಿನದಂಚೆಯಂ ಪೊದಿಸಿ ಪೊರ್ಕುಳಿನೆಸ್ನಯ ಸೋಂಕಿನೊಳ್ಮರ
ಲ್ದಿರಿಸಿ ಲಲಾಟದೊಳ್ತಿಲಕಮಂ ಸೊಡರ್ಪಕ್ಕಿನೊಳಿಟ್ಟು ಮುದ್ದುಸೀ
ವರಮೆರಡುಣ್ಮೆ ಕಣ್ಬಣಿಯದರ್ಭಕನಂ ನಡೆ ನೋಡಿ ನೋಡಿ ಪಾ
ಲ್ದೊರೆವ ಕುಚಂಗಳಿಂ ಬಿಡವೆ ಸೂಸುವ ಸೈಪೆನಗೆಂದು
ಸಾರ್ಗುಮೋ

ಎಂದು ಬಾಲಲೀಲೆಗಳನ್ನು ನೆನೆನೆನೆದು ತಾಯ್ತನಕ್ಕಾಗಿ ಹಂಬಲಿಸುತ್ತಾಳೆ.

ಕಾರ್ಗಾಲವನ್ನು ರಾಕ್ಷಸನ ರೂಪಕದಿಂದ ವರ್ಣಿಸಿರುವ ರೀತಿಯಾಗಲಿ ವಿಧಿಯನ್ನು ಮದೇಭದ ರೂಪಕದಿಂದ ವರ್ಣಿಸಿದ ಪರಿಯಾಗಲಿ ಪರಿಣಾಮಕಾರಿಯಾಗಿವೆ :

ಉಗುಳುತ್ತುಂ ಸಿಡಿಲೆಂಬ ತೋರ ಕಿಡಿಯಂ ಕಾಲೂಱಿ ಭೂಭಾಗ
ದೊಳ್
ಗಗನಾಭೋಗಮನೆಯ್ದೆ ನೀಳ್ದ ಘನವೇಣೀ ಬಂಧಮಂ ಬಿರ್ಚಿ ಮಿಂ

ಚುಗಳೆಂಬುಳ್ಳುವ ದಾಡೆಗಳೊಪ್ಪೆಳೆಯೆ ಚಂದ್ರಾದಿತ್ಯರಂ ನುಂಗಿ ಬೇ
ಸಗೆಯುಂ ಬೆರ್ಚಿಸಿ ಗರ್ಜಿಸುತ್ತು ನೊಗೆದಂ ಕಾರೆಂಬ ಕಾಳಾಸುರಂ

ಯುವಸಪ್ತಚ್ಛದಮಂ ವಯಃಪರಿಣತ ಶ್ರೀಖಂಡಮಂ ಬಾಳಶಾ
ಲಿವನ ಶ್ರೇಣಿಗಳಂ ಪಡಲ್ವಡಿಸಿ ನಾನಾವೇಹಭೂಜಂಗಳಂ
ಕವಳಂಗೊಂಡು ಕಲಂಕಿದತ್ತು ಪಲವುಂ ಪಾತಾಳಕಾಸಾರಮಂ
ಭನಕಾಂತಾರದೊಳದ್ಭುತಂ ವಿಧಿವುದೋನ್ಮತ್ತೇಭವಿಕ್ರೀಡಿತಂ

ಶರತ್ಕಾಲದ ಬೆಳ್ಮುಗಿಲನ್ನು ವರ್ಣಿಸುವಲ್ಲಿ ನಾಗಚಂದ್ರನ ಸ್ವೋಪಜ್ಞತೆ ಎದ್ದು ಕಾಣುತ್ತದೆ:

ಪೆಸೆಯಿಕ್ಕಿ ಪೋದುವಚಿರಾಂ
ಶು ರಸನಘನಕಾಲವಿಷಧರಂಗಳ್ ಗಗನೋ
ದರಗಹ್ವರದೊಳೆನಲ್ತುರ
ತರದಿಂ ಪಸರಿಸಿದುವಂದು ಬೆಳಿಯ ಮುಗಿಲ್ಗಳ್

ಹೀಗೆಯೆ ದೂಳಿಸಂಜೆಯ ನಭ "ಎಣ್ಣೆದೊಡೆದ ಕನ್ನಡಿಯೊಲ್" ಮಸುಕಾಗಿತ್ತೆಂದು ಚಿತ್ರಿಸುವಲ್ಲಿ, ವೈಶ್ರವಣ ತನ್ನ ವಗನಿಗಿಕ್ಕಿದ ಮುಕುಟವನ್ನು ಭೂಭಾರಕ್ಕೆಳವಟ್ಟ ಸಿಂಬೆಗೆ ಹೋಲಿಸುವಲ್ಲಿ ವಿಶಿಷ್ಟತೆಯನ್ನು ಗುರುತಿಸಬಹುದು.

ನಾಗಚಂದ್ರ ಸುಂದರವಾದ ಸ್ವಭಾವೋಕ್ತಿ ಚಿತ್ರಗಳನ್ನು ಕೊಡಬಲ್ಲ. ಲಕ್ಷ್ಮೀದೇವಿ ಕಂಡ ಹಂಸಿ ಮತ್ತು ಅವರ ನುರಿಯ ವರ್ಣನೆಯನ್ನು ಲಕ್ಷಿಸಬಹುದು. ಶರತ್ಕಾಲದ ಬಗೆಬಗೆಯ ಹಸುರುಗಳ ಚಿತ್ರಗಳನ್ನು ಕವಿ ಕುಶಲವರ್ಣಶಿಲ್ಪಿಯಂತೆ ಈ ಪದ್ಯದಲ್ಲಿ ಹೃದ್ಯವಾಗಿ ಮೂಡಿಸಿದ್ದಾನೆ:

ಕಳವೆಯ ಕೆಯ್ವೊಲಂಗಳ ಪಸುರ್ಪು ದಿಶಾಪಟಳಕ್ಕೆ ಪಮ್ಮಿನೀ
ದಳದ ಪಸುರ್ಪು ಪೆರ್ಗೆಜ್ಜೆಗೆ ತಟ್ಟೆಳವುಲ್ಲ ಪಸುರ್ಪು ಕೈಳನೋ

ಖಳೆಗೆ ಶುಕಪ್ರತಾನದ ಪಸುರ್ಪು ವಿಯದ್ವಳಯಕ್ಕೆ ಪಚ್ಚೆಯಿಂ
ವಿಳಸನಮುನಿಕ್ಕಿದಂತೆಸೆಯೆ ಭೂಪತಿ ಮೆಚ್ಚಿ ಶರದ್ವಿಳಾಸಮಂ

ಮಲ್ಲಿನಾಥನ ಜನ್ಮಾಭಿಷೇಕ ಕಲ್ಯಾಣವಾಗುವಾಗ, ತನ್ನ ಶತಬಾಹುಗಳಲ್ಲಿ ಕುಂಭಗಳನ್ನು ಧರಿಸಿ ನಿಂತ ದೇವೇಂದ್ರನ ಚಿತ್ರ ಅಪೂರ್ವ ಉಪಮೆಯೊಂದನ್ನಾಧರಿಸಿ ನಿಜಕ್ಕೂ ಭವ್ಯವಾಗಿದೆ:

ದಿವಿಜರ ಪಡೆ ನೀಡುವ ಕುಂ
ಭವೆಲ್ಲಮಂ ತಳೆದು ವಿಕ್ರಿಯಾವಿಭವಸಮು
ದ್ಭವ ಭಜಶಾಖಾಶತದಿಂ
ದಿವಿಜೇಂದ್ರಂ ಬರ್ಕೆವಲಸು ಕಾಯ್ತಂತಿರ್ದಂ

ಜಿನನನ್ನು ತಪೋಭ್ರಷ್ಟನನ್ನಾಗಿ ಮಾಡಲು ಯತ್ನಿಸಿದ ಮಾರ ತನ್ನ ಕೋಪಾಗ್ನಿಯಿಂದಲೆ ಬೆಂದುಹೋದುದನ್ನು ಕವಿ ಶಕ್ತಿವತ್ತಾಗಿ ಬಣ್ಣಿಸುತ್ತಾನೆ:

ಬಿದಿರೊಳ್ಪುಟ್ಟಿದ ಕಿಚ್ಚಿನಂತೆ ಸುಡೆ ತನ್ನಂ ತನ್ನ ಕೋಪಾನಳಂ
ಮದನಂ ಮುನ್ನಮೆ ಬೆಂದು ತನ್ಮುನಿಯ ಬೋಧಾಳೋಕಸೌಧಾಂ
ಬುವಾ
ಹದಯಾವರ್ಷಣದಿಂ ಕ್ಷಣಂ ತಡೆದನೇ ತಣ್ಣೀರ್ಗಳಿಂ ಬೇವ ಸು
ಣ್ಣದ ಕಲ್ಲಂತಿರೆ ಬೆಂದನುಣ್ಮೆ ಸುರಪುಷ್ಪಾಸಾರಭೇರೀರವಂ

ಈ ಕಾಮದಹನ ಪ್ರಸಂಗ ಕಾವ್ಯದಲ್ಲಿ ಮಹತ್ವದ್ದು; 'ಉತ್ತರ ಪುರಾಣ'ದಲ್ಲಿಲ್ಲದ್ದು. ವೈದಿಕ ಕಥೆಗೆ ಕವಿ ಜೈನಧರ್ಮೀಯವಾದ ತಿರುವು ತಿರುಳುಗಳನ್ನು ಕೊಟ್ಟಿದ್ದಾನೆ.

ನಾಗಚಂದ್ರನ ಅತ್ಯುತ್ತಮ ವರ್ಣನೆಗಳನ್ನು ಅವನ ಆರಾಧ್ಯರಸವಾದ ಶಾಂತದ ಪ್ರತಿಪಾದನೆಯಲ್ಲಿ ಕಾಣಬೇಕು.

ಶಾಂತರಸನಿರೂಪಣೆ: 'ಉತ್ತರಪುರಾಣ'ದಲ್ಲಿ ಬರುವ ಮಲ್ಲಿ ಜಿನನ ಕತೆ ನೀರಸವಾದುದು; ಶುದ್ಧ ಪುರಾಣೋಚಿತವಾದುದು.

ನಾಗಚಂದ್ರ ಅದನ್ನು ರಸಾನ್ವಿತ ಕಲಾಕೃತಿಯನ್ನಾಗಿಸಲು ಉದ್ದೇಶಿಸಿದ್ದಾನೆ. ಪ್ರಾರಂಭದಲ್ಲ ಶೃಂಗಾರವನ್ನು ಅವನು ಎಷ್ಟೆ ತಲ್ಲೀನತೆಯಿಂದ ಚಿತ್ರಿಸಿರಲಿ, ಕಥೆಯು ಮುಖ್ಯಭಾಗಕ್ಕೆ ಬಂದಾಗ ಜಾಗೃತನಾಗಿ ಅದನ್ನು ಹಿಂದಿಕ್ಕಿ, ಶಾಂತರಸಕ್ಕೆ ಅಗ್ರಪಟ್ಟ ಕಟ್ಟಿದ್ದಾನೆ. "ಶಾಂತಮೆ ಪುಣ್ಯಹೇತುವಘಹೇತು ಗಳನ್ಯರಸಂಗಳ್" ಎಂಬುದೇ ಅವನ ನಂಬಿಕೆ; ಪರಮ ಶಾಂತಾತ್ಮಕನಾದ ಜಿನನ ಚರಿತ್ರೆಯಲ್ಲಿ ಅದು ಸಹಜ, ಸಮುಚಿತ. ಹೀಗಾಗಿ, 'ಮಲ್ಲಿನಾಥ ಪುರಾಣ'ದ ಉತ್ತರ ಭಾಗ ಶಾಂತಪ್ರಧಾನವಾಗಿದೆ, ಉದಾತ್ತ ಗಂಭೀರವಾಗಿದೆ. ಪೂರ್ವಾರ್ಧದಲ್ಲಿ "ವಿಷಯಸುಖಗಳ ಚಿತ್ರ: ಚಿತ್ರದ ಮೇಲೆ ಚಿತ್ರ, ಬಣ್ಣದ ಮೇಲೆ ಬಣ್ಣ, ರಾಗದ ಮೇಲೆ ರಾಗ, ಭೋಗದ ಮೇಲೆ ಭೋಗ-ಚರ್ವಿತಚರ್ವಣ"; ಉತ್ತರಾರ್ಧದಲ್ಲಿ "ಚತುರಕವಿಯ ಚಾತುರ್ಯ ಹಿಮ್ಮೆಟ್ಟಿ...ನಾಗಚಂದ್ರನ ಹೃದಯದಿಂದ ಆಳವಾದ ಗಂಭೀರವಾದ ಆತ್ಮಸ್ವರ ಏಳುತ್ತದೆ; ಕವಿತ್ವದ ಬಣ್ಣದೆಳೆ ಹೋಗಿ ಪರಮಸುಖದ, ನಿಶ್ಚಲ ದರ್ಶನದ, ವಿಮಲರತ್ನತ್ರಯದ ಚಿನ್ನದೆಳೆ ಹೊಮ್ಮುತ್ತದೆ".

ಕವಿ ಶರದಾಗಮನವನ್ನು ವರ್ಣಿಸುವಲ್ಲಿಯೆ ಮುಂದಿನ ಸಮವಸರಣಕ್ಕೊಂದು ಧವಳಪೀಠಿಕೆಯನ್ನು ಸವೆದಿದ್ದಾನೆ. ವೈಶ್ರವಣ ಮಹಾರಾಜ ವಿಷಯಸುಖೋಪಭೋಗ ರತನಾಗಿರುವಾಗ ಒಮ್ಮೆ ಶರತ್ಕಾಲ ಪ್ರಾಪ್ತಿಸುತ್ತದೆ. ಹೇಗೆ?—

ಕಿಡಿಸಿ ಕಳಂಕಪಂಕದೊಡವಂ ಸಮಯೋಚಿತ ಬಂಧು ಜೀವದೊಳ್
ಪಡೆದು ವಿಕಾಸಮಂ ನಿಲೆ ದಿಗಂಬರ ನಿರ್ಮಲವೇಷಮೊಂದೆ ತ
ನ್ನೊಡನನುಕೂಲವರ್ತನೆ ಸರಸ್ವತಿಗಾತಪಯೋಗದೊಳ್ಪೊಡಂ
ಬಡೆ ಶರದಾಗಮಂ ನೆನೆಯಿಸಿತ್ತು ಜಿನಾಗಮ ದಿವ್ಯಯೋಗಿಯಂ

ನಿರಭ್ರಶುಭ್ರವೂ ನಿರಾವರಣವೂ ಆದ ಶರದೃತು ಕವಿಗೆ ಜಿನಯೋಗಿಯಂತೆ ತೋರುತ್ತದೆ. ಇದು ತನಗೆ ತಾನೆ ಅತ್ಯಂತ ಪ್ರಶಾಂತಸುಂದರವಾದ ಚಿತ್ರವಾಗಿರುವುದಲ್ಲದೆ, ಸಂಭವಿಸಲಿರುವ ಮಹಾಸಂಕ್ರಾಂತಿಗೊಡ್ಡಿದ ಪ್ರತಿಮೆಯೂ ಆಗಿದೆ. ಶರದಾಗಮ ಪ್ರಕೃತಿಯಲ್ಲಷ್ಟೆ ಆಗದೆ ವೈಶ್ರವಣನ ಬಾಳಿನಲ್ಲೂ ಆಗುತ್ತದೆ. ಇನ್ನು ಶೃಂಗಾರದ ಗಡಬಡೆಯಿಲ್ಲ, ಭೋಗದ ಬಗ್ಗಡವಿಲ್ಲ, ಕಾಮದ ಕೆಸರಿಲ್ಲ. ಶಾರದ ಧವಳಿಮೆಯೊಂದೆ ಮುಂದಿನ ಕತೆಯ ಸ್ಥಾಯಿಯಾಗಿ, ತಾಯಿಯಾಗಿ ನಿಲ್ಲುತ್ತದೆ.

ಬೇರುಡಿದು ಬಿದ್ದ ಆಲದ ಮರವನ್ನು ಕಂಡು ವೈಶ್ರವಣನಿಗೆ ವಿಸ್ಮಯವೆ ವೈರಾಗ್ಯಕ್ಕೆ ಸೇತುವೂ ಹೇತುವೂ ಆದ ಬಳಿಕ, ಆ ವಿರಕ್ತ ಚೇತನಕ್ಕೆ ಪ್ರಭಾತದ ಆಕಾಶ ಹೇಗೆ ಕಾಣಿಸಿತು ಎಂಬುದು ಕನ್ನಡ ಸಾಹಿತ್ಯದ ವೈಶಿಷ್ಟ್ಯಪೂರ್ಣ ವರ್ಣನೆಗಳಲ್ಲೊಂದು :

ಮೂಡಣ ಸಂಜೆ ಕೆಂದಳಿರ ಕಾವಣದಂತಿರೆ ಚಂದ್ರಮಂಡಳಂ
ಬಾಡಿದ ಮಾಧವೀಮಧುರ ಮಂಜರಿಯಂತಿರೆ ತಾರಕಾಳಿ ನೀ
ರೋಡಿ ಕಟಲ್ಲು ಬೀಟ್ವ ಕಳಿವೂಗೆಣೆಯಾಗಿರೆ ತಣ್ಣನಪ್ಪೆಲರ್
ತೀಡೆ ತಪೋವನಂಬೊಲತಿ ಪಾವನಮಾಯ್ತು ನಭಂ ಪ್ರಭಾತದೊಳ್

ಲೌಕಿಕ ಚಿತ್ತವೃತ್ತಿಗಳ ತಾಕಲಾಟವೆಲ್ಲ ಅಳಿದು, ಶಮೆ ನೆಲೆಗೊಂಡ ಮನಸ್ಸಿಗೆ ಆಗಸ ತಪೋವನದಂತೆ ನಿರ್ಮಲವಾಗಿ ಪವಿತ್ರವಾಗಿ ತೋರುತ್ತದೆ. ಶೃಂಗಾರೋದ್ದೀಪಕವಾದ ಚಂದ್ರ ತಾರೆ ಪುಷ್ಪಾದಿಗಳೆಲ್ಲ ಇಲ್ಲಿ ಕಳಾಹೀನವಾಗಿ ಅನಾಕರ್ಷಕವಾಗಿ ನಿಲ್ಲುತ್ತವೆ. ಕಳಿತ ಹೂವಿನಂತೆ ವೈಶ್ರವಣನ ಭವ ಕಳಚಿ

ಬೀಳಲು ಸಿದ್ಧವಾಗಿದೆ. ಪಾತ್ರದ ಮನಃಸ್ಥಿತಿಗೂ ನಿಸರ್ಗಕ್ಕೂ ಹೀಗೆ ನಿಕಟಸಂಬಂಧ ಕಲ್ಪಿಸುವ ವರ್ಣನೆಗಳು ನಮ್ಮಲ್ಲಿ ಬಹಳವಿಲ್ಲ.

ವೈಶ್ರವಣ ಹಾಗೂ ದೇವತೆಗಳು ಮಾಡುವ ಜಿನಸ್ತುತಿಗಳು ಶಾಂತೋದ್ಬೋಧಕವಾಗಿವೆ. ವೈಶ್ರವಣೋಕ್ತವಾದ ಜಿನಾಷ್ಟಕ ವಂತೂ ಒಂದು ಬಂಧುರ ಭಾವಗೀತೆ. ಇವೆಲ್ಲ ಕವಿಯ ಹೃದಯಾಂತರಾಳದಿಂದಲೇ ಚಿಮ್ಮಿದವು ಎಂಬುದರಲ್ಲಿ ಸಂಶಯ ವಿಲ್ಲ. ಅಂತಹ ಆತ್ಮೀಯತೆ ಆರ್ದ್ರತೆಗಳು ಇಲ್ಲಿ ಕಾಣ ಸಿಗುತ್ತವೆ. ಇದೊಂದು ಪದ್ಯ ಅನುಪಮವಾದುದು :

ನಿನಗೆ ರಸಮೊಂದೆ ಶಾಂತಮ<br>
ಜಿನೇಂದ್ರಮನಮಾ ರಸಾಂಬುನಿಧಿಯೊಳಗವಗಾ<br>
ಹನಮಿರ್ದು ಮಿಕ್ಕ ರಸಮುಂ<br>
ಕನಸಿನೊಳಂ ನೆನೆಯದಂತು ಮಾಡೆನಗರ್ಹಾ

'ಅಕ್ಷಯ ಸುಖರಸ'ವಾದ ಶಾಂತವೊಂದೆ ಭಗವಂತನ ಸ್ವರೂಪ; ಭವಬದ್ಧ ಜೀವಿಗಳಿಗೆಲ್ಲ ಅದೇ ಗಂತವ್ಯ. ಮನಸ್ಸು ಈ ಶಾಂತದಲ್ಲಿ ಮುಳುಗಿತೋ ಅದೇ ಮೋಕ್ಷ, ಪರನಿರ್ವೃತಿ. "ಮಿಕ್ಕರಸಮುಂ ಕನಸಿನೊಳಂ ನೆನೆಯದಂತು ಮಾಡು" ಎಂಬ ಪ್ರಾರ್ಥನೆ ಬಹಳ ಮುಖ್ಯವಾದುದು. ಉಳಿದ ರಸಗಳಿರಲಿ, ಶೃಂಗಾರ (ಕಾಮ)ವಂತೂ ಕನಸಿನಲ್ಲಿ ಕಾಡುತ್ತದೆ; ಜಾಗ್ರದ ವಸ್ಥೆಯಲ್ಲಿ ಅದನ್ನು ನಿಗ್ರಹಿಸಿದರೂ ಸ್ವಪ್ನಾವಸ್ಥೆಯಲ್ಲಿ ಸೇಡು ತೀರಿಸಿಕೊಳ್ಳುತ್ತದೆ. ಮನೋವಿಜ್ಞಾನವೂ ಇದನ್ನೇ ಹೇಳುತ್ತದೆ. ಆದ್ದರಿಂದಲೆ "ಕನಸಿನೊಳಂ ನೆನೆಯದಂತು ಮಾಡು" ಎಂಬ ಯಾಚನೆ. ಇಡೀ ಪದ್ಯ ಬಹಳ ಧ್ವನಿಪೂರ್ಣವಾಗಿದೆ.

ದೇವರನ್ನಾಗಲಿ ತೀರ್ಥಂಕರನನ್ನಾಗಲಿ ಮತ್ತಾವ ಕವಿಯೂ ಹೀಗೆ ಸ್ತೋತ್ರಿಸಿದಂತಿಲ್ಲ.

ಹೀಗೆಯೆ ದೇವತೆಗಳ ಜಿನಸ್ತವನ ಹೃದ್ಯವಾಗಿದೆ :

ಮದನಪತತ್ರಿ ನಿನ್ನ ದೆಸೆಗಾಣದು ಮೋಹಮಹಾಹಿ ನಿನ್ನನ
ಣ್ಮದು ಕಲುಷಾನಳಂ ನಿಜ ದಯಾರಸದಿಂ ಮಸಿಯಾಯ್ತು ಪಾಪವಿ
ಲ್ಲದೆ ಪಯಣಕ್ಕೆ ನಿನ್ನನುಡಿ ಸಂಬಳಮಾಯ್ತೆನೆ ಪೆಣ್ಣ ಮಣ್ಣ ಮೋ
ಹದ ಪರಮಾತ್ಮರತ್ತಿರಲಿ ನೀನೆ ಜಗತ್‌ಸ್ತುತನೈ ಜಿನೇಶ್ವರಾ

## ೫. ಪಂಪ ರಾಮಾಯಣ

ನಾಗಚಂದ್ರನ ಮತ್ತೊಂದು ಕಾವ್ಯ ಪಂಪರಾಮಾಯಣ ವೆಂಬ ಜನಪ್ರಿಯ ನಾಮಧೇಯದಿಂದ ಪ್ರಖ್ಯಾತಿಗೊಂಡಿರುವ 'ರಾಮಚಂದ್ರಚರಿತ ಪುರಾಣ'; ಹದಿನಾರು ಆಶ್ವಾಸಗಳ ನ್ನೊಳಗೊಂಡ 'ಉದಾತ್ತರಾಘವ'ನ ಆಖ್ಯಾನ. ಇದು ಲೌಕಿಕ ಕಾವ್ಯದಂತೆ ಭಾಸವಾದರೂ, ವಾಸ್ತವವಾಗಿ ಇದು ಕೂಡ ಧಾರ್ಮಿಕ 'ಪುರಾಣ'; ವಾಲ್ಮೀಕಿರಾಮಾಯಣವಲ್ಲ, ಜೈನರಾಮಾಯಣ. ಇದರಲ್ಲಿ ಬರುವ ಪಾತ್ರಗಳೆಲ್ಲ ಜೈನರು ; ಇಡೀ ಕೃತಿಯು ತುಂಬ ಜೈನವಾತಾವರಣ ಸಾಂದ್ರವಾಗಿ ಹರಡಿ ಕೊಂಡಿದೆ. ಇಲ್ಲಿ ರಾಮ ಲಕ್ಷ್ಮಣ ರಾವಣರು ಜೈನ ಶಲಾಕಾ ಪುರುಷರು; ರಾಮ ಲಕ್ಷ್ಮಣರು ಬಲದೇವ ವಾಸುದೇವರು, ರಾವಣ ಪ್ರತಿವಾಸುದೇವ.

'ಮಲ್ಲಿನಾಥಪುರಾಣ'ದಲ್ಲಿ ಕತೆಯು ಹಂದರ ತೆಳುವಾಗಿದ್ದರೆ, 'ರಾಮಚಂದ್ರಚರಿತ ಪುರಾಣ' ಕಥೆಯಿಂದ ಕ್ರಿಯೆಗಳಿಂದ ಪಾತ್ರ ಸನ್ನಿವೇಶಗಳಿಂದ ನಿಬಿಡವಾಗಿದೆ. ಅಲ್ಲಿ ಕಿರಿದಾದ ಕತೆಯನ್ನು ವಿಸ್ತರಿಸುವುದು ನಾಗಚಂದ್ರನ ಉದ್ದೇಶವಾಗಿದ್ದರೆ,

ಇಲ್ಲಿ ಬೃಹತ್ತಾದ ಕತೆಯನ್ನು ಸಂಗ್ರಹಿಸುವ ಸಮಸ್ಯೆಯನ್ನು ಅವನು ಹೆಜ್ಜೆಹೆಜ್ಜೆಗೂ ಎದುರಿಸಬೇಕಾಗಿದೆ. "ಪಿರಿದೆನಿಸಿರ್ದ ರಾಮಕಥೆಯಂ ಕಿಱಿದಾಗಿರೆ" ಹೇಳುವುದು ಅವನ ಗುರಿ.

ನಾಗಚಂದ್ರನ ಕೀರ್ತಿಗೋಪುರ ನಿಂತಿರುವುದು ಮುಖ್ಯವಾಗಿ 'ರಾಮಚಂದ್ರಚರಿತ ಪುರಾಣ'ದ ಅಡಿಪಾಯದ ಮೇಲೆ. ಆದರೆ ಇದು ನಾಗಚಂದ್ರನ ಸ್ವತಂತ್ರವಾದ ಸೃಷ್ಟಿಯಲ್ಲ; ಪ್ರಾಕೃತದಲ್ಲಿದೆ ಇದರ ಮೂಲಾಧಾರ; ಸಂಸ್ಕೃತದಲ್ಲಿ ಕೂಡ.

ಜೈನ ರಾಮಾಯಣಪರಂಪರೆ: ಭರತ ಖಂಡದಲ್ಲಿ ಜನಮನೋಗರ್ಭಿತವಾಗಿದ್ದ ರಾಮಕಥೆಯನ್ನು ಮೊಟ್ಟಮೊದಲು ಕಾವ್ಯಪಾತ್ರದಲ್ಲಿ ಹರಿಸಿದ ಕವಿ ಮಹಾಮುನಿ ವಾಲ್ಮೀಕಿ. ಅವರು ರಚಿಸಿದ ರಾಮಾಯಣ ಮಹಾಕಾವ್ಯ ಭಾರತೀಯರಿಗೆ ಪರಮ ಪೂಜನೀಯವಾದ ಗ್ರಂಥವಾಗಿ, ದಾರಿದೀವಿಗೆಯಾಗಿ, ಕೈಗನ್ನಡಿಯಾಗಿ, ಬದುಕಿನ ಅಭಿನ್ನಾಂಗವಾಗಿ ಪರಿಣಮಿಸಿತು. ವಾಲ್ಮೀಕಿರಾಮಾಯಣದ ಆರಂಭದಲ್ಲೆ ಒಂದು ಮಾತು ಬರುತ್ತದೆ: "ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ, ತಾವತ್ ರಾಮಾಯಣ ಕಥಾ ಲೋಕೇಷು ಪ್ರಚರಿಷ್ಯತಿ." ರಾಮಾಯಣ ಕಥೆ ಸ್ಥಗಿತವಾಗಿ ನಿಲ್ಲುವುದಿಲ್ಲ, ಎಂದೆಂದಿಗೂ ಲೋಕದಲ್ಲಿ ಪ್ರಚಾರಗೊಳ್ಳುತ್ತ ಹೋಗುತ್ತದೆ ಎಂದು ವಾಲ್ಮೀಕಿಗಳೆ ಭವಿಷ್ಯ ನುಡಿದರು. ಅದು ಸತ್ಯವೆ ಆಯಿತು. ವಾಲ್ಮೀಕಿಪರಿಗೀತವಾದ ರಾಮಕಥೆ ಕಾಲ ದೇಶ ವಿಭಿನ್ನವಾಗಿ, ಜನಮನೋಧರ್ಮಾನುಸಾರಿಯಾಗಿ, ಮತಧರ್ಮಾನುರೂಪವಾಗಿ, ಕವಿದರ್ಶನೋಚಿತವಾಗಿ 'ಶತಕೋಟಿ ಪ್ರವಿಸ್ತರ'ವೆನಿಸುವಂತೆ ಬೆಳೆಯುತ್ತ, ಪರಿವರ್ತನೆಗೊಳ್ಳುತ್ತ ಬಂತು. ಆನಂದರಾಮಾಯಣ, ಅಧ್ಯಾತ್ಮರಾಮಾಯಣ,

ಅದ್ಭುತ ರಾಮಾಯಣ, ಶೇಷ ರಾಮಾಯಣ, ವಾಸಿಷ್ಠ ರಾಮಾಯಣ–ಎಷ್ಟೊಂದು ! ದೇಶಭಾಷೆಗಳಲ್ಲಂತೂ ರಾಮಾಯಣದ ಹೀಳಿಗೆಯ ಭಾರ ಫಣಿರಾಯ ತಿಣುಕು ವಷ್ಟಿದೆ. ಇವುಗಳ ಜೊತೆಗೆ ಬೌದ್ಧ, ಜೈನ ರಾಮಾಯಣ ಗಳನ್ನೂ ಗಣಿಸಬೇಕು.

ಬೌದ್ಧರು ಮತ್ತು ಜೈನರು–ವಿಶೇಷವಾಗಿ ಜೈನರು–ತಮ್ಮ ಧರ್ಮದ ಪ್ರಸಾರಕ್ಕಾಗಿ ವೈದಿಕ ಕಥೆಗಳನ್ನು ತೆಗೆದುಕೊಂಡು ಅವಕ್ಕೆ ತಮ್ಮ ಧರ್ಮದ ವೇಷ ತೊಡಿಸಿದರು. ಸರ್ವಜನ ಪ್ರಿಯವಾಗಿದ್ದ ಈ ಕತೆಗಳ ಮೂಲಕ ತಮ್ಮ ಧರ್ಮವನ್ನು ಹರಡುವುದು ಸುಲಭ, ಜನವಶೀಕರಣ ಸಾಧ್ಯ ಎಂದು ಅವರು ಆಲೋಚಿಸಿದುದು ಸಹಜ. ಅಲ್ಲದೆ, ವೈದಿಕ ಕತೆಗಳಲ್ಲಿ ಕಂಡು ಬರುವ ಅತಿಮಾನುಷವಾದ, ಅಸಂಭಾವ್ಯವಾದ ಅಂಶಗಳನ್ನು ನಿವಾರಿಸಿ ಅವು ಹೆಚ್ಚು ಮಾನವೀಯವೂ ತರ್ಕಬದ್ಧವೂ ಆಗು ವಂತೆ ಮಾಡುವುದು ಕೂಡ ಅವರ ಉದ್ದೇಶವಾಗಿದ್ದಂತೆ ತೋರು ತ್ತದೆ. ಈ ಪ್ರಯತ್ನದಲ್ಲಿ ಸುಕೃತಿಗಳಿಗಿಂತ ವಿಕೃತಿಗಳು ಸಂಭವಿಸಿದ್ದೆ ಹೆಚ್ಚು. ಅಂತೂ ಇದರ ಫಲವಾಗಿ ರಾಮಾಯಣ ಭಾರತಗಳ ಬೌದ್ಧ, ಜೈನ ಪರಂಪರೆಗಳನ್ನು ನಾವು ನೋಡು ತ್ತೇವೆ.

ಪ್ರಕೃತ, ಜೈನರಾಮಾಯಣಪರಂಪರೆ ಬಹಳ ಪ್ರಾಚೀನ ವಾದುದು; ಸಂಸ್ಕೃತ ಪ್ರಾಕೃತಗಳಲ್ಲಿ ಅದರ ಹರಹು ಕಾಣು ತ್ತದೆ. ಈ ಪರಂಪರೆಯಲ್ಲಿ ಎರಡು ಶಾಖೆಗಳುಂಟು: ಒಂದು ವಿಮಲ ಸೂರಿಯದು, ಮತ್ತೊಂದು ಗುಣಭದ್ರಾಚಾರ್ಯನದು. ವಿಮಲಸೂರಿಯ ಸಂಪ್ರದಾಯವೆ ಹೆಚ್ಚು ಪ್ರಚುರವೂ ಗಮನಾರ್ಹವೂ ಆಗಿರತಕ್ಕದ್ದು ; ಗುಣಭದ್ರನ ಶಾಖೆ

ಅಷ್ಟೊಂದು ಜನಪ್ರಿಯವಾಗಿಲ್ಲ. ವಿಮಲಸೂರಿಯ 'ಪಉಮ ಚರಿಯ' (ಪದ್ಮಚರಿತ) ಅತ್ಯಂತ ಪ್ರಾಚೀನವಾದ ಜೈನ ರಾಮಾಯಣ; ಇದರ ಭಾಷೆ ಜೈನ ಮಹಾರಾಷ್ಟ್ರೀ ಪ್ರಾಕೃತ; ಇದು ಕ್ರಿ.ಶ. ೩ನೆಯ ಶತಮಾನದಲ್ಲಿ ರಚಿತವಾದಂತೆ ತಿಳಿಯುತ್ತದೆ. ಇದಕ್ಕಿಂತ ಹಿಂದೆಯೇ ಜೈನ ರಾಮಾಯಣಪರಂಪರೆ ಇದ್ದಿರ ಬೇಕು. ಸಂಸ್ಕೃತದಲ್ಲಿ ರವಿಷೇಣ (ಕ್ರಿ.ಶ ೬೭೮) ಬರೆದಿರುವ 'ಮಹಾ ರಾಮಾಯಣ' (ಪದ್ಮಪುರಾಣ) ವಿಮಲಸೂರಿಯ ಸಂಪ್ರದಾಯಕ್ಕೆ ಸೇರಿದ ಕೃತಿ. ಕನ್ನಡಕವಿ ನಾಗಚಂದ್ರನಿಗೆ ಬಹುಶಃ ವಿಮಲಸೂರಿಯ ರಾಮಾಯಣವೆ ನೇರವಾದ ಆಕರ; ರವಿಷೇಣನಿಂದಲೂ ಅವನು ವಿಶೇಷ ಪ್ರಭಾವಿತನಾಗಿದ್ದಾನೆ.

ವಿಮಲಸೂರಿಯ ರಾಮಾಯಣ ವಾಲ್ಮೀಕಿರಾಮಾಯಣ ಕ್ಕಿಂತ ಬಹಳ ಭಿನ್ನವಾದುದು. ವಿಮಲಸೂರಿ ಜೈನ ಧರ್ಮಕ್ಕೆ ತಕ್ಕಂತೆ, ಆ ಧರ್ಮದ ತತ್ತ್ವಗಳ ಪ್ರಕಾಶನಕ್ಕೆ ಅನುಕೂಲಿಸು ವಂತೆ ವಾಲ್ಮೀಕಿಯ ಕತೆಯಲ್ಲಿ ಹಲವಾರು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ಇವು ನಾಗಚಂದ್ರನ ಕಾವ್ಯಕ್ಕೂ ಇಳಿದು ಬಂದಿದೆ.

ವಾಲ್ಮೀಕಿ ರಾಮಾಯಣ ಮತ್ತು ಪಂಪ ರಾಮಾಯಣ: ವಾಲ್ಮೀಕಿ ರಾಮಾಯಣಕ್ಕೂ ಪಂಪ ರಾಮಾಯಣಕ್ಕೂ ಕತೆಯ ಚೌಕಟ್ಟು ಉಭಯ ಸಾಮಾನ್ಯವಾದುದು. ರಾಮ ಲಕ್ಷ್ಮಣ ಸೀತೆಯರು ಕಾಡಿಗೆ ಹೋದುದು, ರಾವಣ ಸೀತೆ ಯನ್ನು ಅಪಹರಿಸಿದುದು, ರಾಮ ರಾವಣನನ್ನು ಕೊಂದುದು ಈ ಅಂಶಗಳು ಎರಡು ಕಡೆಯೂ ಉಂಟು. ಆದರೆ ಸೂಕ್ಷ್ಮ ವಾಗಿ ಪರಿಶೀಲಿಸಿದಾಗ ಎರಡು ರಾಮಾಯಣಗಳಿಗೂ ಇರುವ ಮಹದಂತರ ವೇದ್ಯವಾಗುತ್ತದೆ. ಕಥೆಯ, ಪಾತ್ರಗಳ ವಿವರ

ಗಳಲ್ಲಿ ವಾಲ್ಮೀಕಿ ರಾಮಾಯಣಕ್ಕೂ ಪಂಪ ರಾಮಾಯಣ-ಅರ್ಥಾತ್ ಜೈನರಾಮಾಯಣ-ಕ್ಕೂ ಇರುವ ಕೆಲವು ಮುಖ್ಯವಾದ ವ್ಯತ್ಯಾಸಗಳನ್ನು ನೋಡಬಹುದು.

ವಾಲ್ಮೀಕಿರಾಮಾಯಣದಲ್ಲಿ ರಾಮ ಲಕ್ಷ್ಮಣರು ಅವತಾರ ಪುರುಷರು ; ಪಂಪರಾಮಾಯಣದಲ್ಲಿ ಸಾಮಾನ್ಯರು, ಆದರೆ ಕಾರಣ ಪುರುಷರು. ಇಲ್ಲಿ ರಾಮ ಕಥಾನಾಯಕನೆನಿಸಿದ್ದರೂ ಲಕ್ಷ್ಮಣನಿಗೇ ಉದ್ದಕ್ಕೂ ಪ್ರಾಧಾನ್ಯ, ಅವನೇ ವಾಸುದೇವ, ನಾರಾಯಣ. ಕಡೆಗೆ ರಾವಣನನ್ನು ಕೊಲ್ಲುವವನು ಅವನೇ, ರಾಮನಲ್ಲ. ಅಹಿಂಸಾವ್ರತನಿಷ್ಠನಾದ ರಾಮ ವಧೆ ಮಾಡುವುದಿಲ್ಲ.

ದಶರಥನ ಪುತ್ರಕಾಮೇಷ್ಟಿಯ ಪ್ರಸ್ತಾಪ ಪಂಪರಾಮಾಯಣದಲ್ಲಿಲ್ಲ; ಇಲ್ಲಿ ದಶರಥನಿಗೆ ನಾಲ್ವರು ರಾಣಿಯರು. ರಾಮ ಹಿರಿಯವಳಾದ ಅಪರಾಜಿತೆಯ ಮಗ. ಲಕ್ಷ್ಮಣ ಶತ್ರುಘ್ನರು ಇಲ್ಲಿ ಒಬ್ಬ ತಾಯ ಮಕ್ಕಳಲ್ಲ. ವಿಶ್ವಾಮಿತ್ರ, ಮಂಥರೆಯರ ಪ್ರಸ್ತಾಪವೂ ಇಲ್ಲಿಲ್ಲ.

ವಾಲ್ಮೀಕಿರಾಮಾಯಣದಲ್ಲಿ ಸೀತೆ ಅಯೋನಿಜೆ ; ಪಂಪ ರಾಮಾಯಣದಲ್ಲಿ ಹಾಗೇನಲ್ಲ. ಅವಳ ಅಣ್ಣ ಪ್ರಭಾಮಂಡಲನ ವಿಷಯವಿಲ್ಲಿ ಬರುತ್ತದೆ. ಅವನೊಮ್ಮೆ ಅರಿಯದೆ ತಂಗಿ ಸೀತೆಯನ್ನು ಮೋಹಿಸಿ, ಅನಂತರ ಪಶ್ಚಾತ್ತಾಪ ಪಡುತ್ತಾನೆ. ನಾರದನೂ ಒಮ್ಮೆ ಸೀತೆಯಲ್ಲಿ ಅನುರಕ್ತನಾದಂತೆ ಹೇಳಿದೆ.

ವಾಲ್ಮೀಕಿ ರಾಮಾಯಣದ ಭರತ ಭ್ರಾತೃವತ್ಸಲನಾದರೆ, ಇಲ್ಲಿ ಬರುವ ಭರತ ರಾಮಲಕ್ಷ್ಮಣರ ವೈಭವದಿಂದ ಮತ್ಸರಗ್ರಸ್ತನಾಗಿ ದೀಕ್ಷೆ ವಹಿಸುತ್ತಾನೆ.

ವೈದಿಕ ರಾಮಾಯಣದಲ್ಲಿ ಏಕಪತ್ನೀವ್ರತಸ್ಥರಾದ ರಾಮ

ಲಕ್ಷ್ಮಣರಿಗೆ ಜಿನರಾಮಾಯಣದಲ್ಲಿ ಅನೇಕ ಮದುವೆಗಳಾಗಿವೆ. ಚಿರಬ್ರಹ್ಮಚಾರಿಯಾದ ಆಂಜನೇಯ ಕೂಡ ಇಲ್ಲಿ ವಿವಾಹಿತ. ಅವನು ರಾವಣನ ತಂಗಿಯಾದ ಚಂದ್ರನಖಿಯ ಅಳಿಯ. ಮೊದಲು ಅವನು ರಾವಣನಿಗೆ ಬೆಂಬಲವಾಗಿದ್ದು, ರಾವಣನ ದುಶ್ಚರಿತವನ್ನು ಕಂಡ ಬಳಿಕ ವಿರುದ್ಧವಾಗಿ, ರಾಮನಿಗೆ ಸಹಾಯಕನಾಗುತ್ತಾನೆ.

ರಾಮ ಲಕ್ಷ್ಮಣರು ವನವಾಸಕ್ಕೆ ಹೋದಮೇಲೆ ದಶರಥ ಮೃತನಾದಂತೆ ವಾಲ್ಮೀಕಿಗಳಲ್ಲಿ ಹೇಳಿದೆ; ಇಲ್ಲಿ ಅವನು ಜಿನ ದೀಕ್ಷಿತನಾಗುತ್ತಾನೆ.

ವಾಲಿ ಸುಗ್ರೀವಾದಿಗಳು ಇಲ್ಲಿ ವಾನರರಲ್ಲ, ವಾನರಧ್ವಜರು. ವಾಲಿಯೊಮ್ಮೆ ಕೈಲಾಸದಲ್ಲಿ ತಪಸ್ಸು ಮಾಡುತ್ತಿದ್ದಾಗ, ರಾವಣ ಹೋಗಿ ಆ ಪರ್ವತವನ್ನೆತ್ತಿದನಂತೆ; ವಾಲಿ ಅದನ್ನು ಮೆಟ್ಟಿದಾಗ ರಾವಣನ ಕೈ ಸಿಕ್ಕಿಹಾಕಿಕೊಂಡು ಅವನು ಅರಚಿದುದರಿಂದ 'ರಾವಣ'ನೆಂದು ಹೆಸರಾದನಂತೆ. ಇಲ್ಲಿ ಕಾರ್ತವೀರ್ಯ ರಾವಣನನ್ನು ಸೆರೆ ಹಿಡಿಯುವುದಿಲ್ಲ; ಇವನೇ ಅವನನ್ನು ಬಂಧಿಸುತ್ತಾನೆ. ಸುಗ್ರೀವನ ತಂಗಿಯಾದ ಶ್ರೀಪ್ರಭೆಯನ್ನು ರಾವಣ ಮದುವೆಯಾಗಿದ್ದನಂತೆ.

ಸೀತಾಪಹರಣದ ಮೂಲಕಾರಣ ಪಂಪರಾಮಾಯಣದಲ್ಲಿ ವಾಲ್ಮೀಕಿ ರಾಮಾಯಣದಲ್ಲಿರುವುದಕ್ಕಿಂತ ಭಿನ್ನವಾಗಿದೆ. ವಾಲ್ಮೀಕಿ ರಾಮಾಯಣದ ಉತ್ತರಕಾಂಡದಲ್ಲಿ ಬರುವ ಶಂಬುಕನ ಪ್ರಸಂಗವನ್ನು ಇಲ್ಲಿ ಜೈನ ಕವಿಗಳು ಬಹಳ ಚಾತುರ್ಯದಿಂದ ಬಳಸಿಕೊಂಡಿದ್ದಾರೆ. ಶಂಬುಕ ಇಲ್ಲಿ ರಾವಣನ ತಂಗಿಯಾದ ಚಂದ್ರನಖಿಯ ಮಗ. ಅವನೊಮ್ಮೆ ಕಾಡಿನಲ್ಲಿ ತಪಸ್ಸು ಮಾಡುತ್ತಿರುವಾಗ, ಲಕ್ಷ್ಮಣ ಗೊತ್ತಿಲ್ಲದೆ ಅಲ್ಲಿದ್ದ ಚಂದ್ರಹಾಸ

ಖಡ್ಗದಿಂದ ಅವನನ್ನು ಕೊಲ್ಲುತ್ತಾನೆ. ಮಗನನ್ನು ಕಳೆದು ಕೊಂಡು ಶೋಕತಪ್ತಳಾದ ಚಂದ್ರನಖಿ ರಾವಣನಿಗೆ ದೂರು ಹೇಳಿ ಸೀತಾಪಹರಣಕ್ಕೆ ಪರೋಕ್ಷ ನಿಮಿತ್ತವಾಗುತ್ತಾಳೆ.

ಮಾರೀಚ ಮಾಯಾಮೃಗವಾದ ಪ್ರಸಂಗ ಇಲ್ಲಿ ಬರುವುದಿಲ್ಲ. ರಾವಣನ ವಶದಲ್ಲಿದ್ದ ಅವಲೋಕಿನೀ ವಿದ್ಯೆ ಲಕ್ಷ್ಮಣನಂತೆ ಸಿಂಹನಾದಮಾಡಿ ರಾಮ ಸೀತೆಯರನ್ನು ವಂಚಿಸುತ್ತದೆ.

ವಾಲ್ಮೀಕಿ ರಾಮಾಯಣದಲ್ಲಿ ಉಕ್ತವಾಗಿರುವಂತೆ ಸಮುದ್ರಕ್ಕೆ ಸೇತುವೆ ಕಟ್ಟುವ ಪ್ರಸಂಗ ಜೈನರಾಮಾಯಣದ ಲ್ಲಿಲ್ಲ. ರಾಮಲಕ್ಷ್ಮಣರು ಆಕಾಶ ಗಮನ ವಿದ್ಯೆಯಿಂದ ಕಡಲನ್ನು ದಾಟುತ್ತಾರೆ.

ಇಂಥ ಸೂಕ್ಷ್ಮವಾದ ಮಾರ್ಪಡೆಗಳೆಷ್ಟೊ ಇಲ್ಲಿ ಕಂಡು ಬರುತ್ತವೆ. ಆದರೆ ಪಂಪರಾಮಾಯಣಕ್ಕೂ ವಾಲ್ಮೀಕಿ ರಾಮಾಯಣಕ್ಕೂ ಪ್ರಮುಖವಾದ, ಕಲಶಪ್ರಾಯವಾದ ವ್ಯತ್ಯಾಸವಿರುವುದು ರಾವಣನ ಪಾತ್ರದಲ್ಲಿ. ಈ ಜೈನ ರಾಮಾಯಣದ ರಾವಣಪಾತ್ರವೊಂದು ವಿಶಿಷ್ಟ ಸೃಷ್ಟಿ; ಭಾರತೀಯ ಸಾಹಿತ್ಯಕ್ಕೊಂದು ಮಹತ್ವಪೂರ್ಣವಾದ ಕೊಡುಗೆ. ಹಲವು ವಿಕೃತಿಗಳ ನಡುವೆ ಅದೊಂದು ಸುಕೃತಿ.

ಪಂಪ ರಾಮಾಯಣದ ರಾವಣ : ವಾಲ್ಮೀಕಿರಾಮಾಯಣದಲ್ಲಿ ಚಿತ್ರಿತವಾಗಿರುವ ರಾವಣ ಮಹಾದುಷ್ಟ, ಲೋಕಕಂಟಕ, ಪರಸ್ತ್ರೀಕಾಮುಕ. ಅವನ ಒಂದು ಮುಖವನ್ನು ಮಾತ್ರ ವಾಲ್ಮೀಕಿಗಳು ತಮ್ಮ ಕಾವ್ಯದಲ್ಲಿ ತೋರಿಸಿದ್ದಾರೆ. ಅವನ ವ್ಯಕ್ತಿತ್ವದ ವಿವಿಧ ಮುಖಗಳೇನು, ಅವನ ದೌರ್ಬಲ್ಯಕ್ಕೇನು ಕಾರಣ, ಅವನ ಮನಸ್ಸಿನಲ್ಲಿ ನಡೆದ ಹೋರಾಟವೆಂಥದು— ಇತ್ಯಾದಿ ಪ್ರಶ್ನೆಗಳಿಗೆಲ್ಲ ಅವರಲ್ಲಿ ಉತ್ತರವಿಲ್ಲ. ಆದರೆ ರಾವಣನ

ಉದಾತ್ತತೆಯ ಸೂಚನೆಗಳು ವಾಲ್ಮೀಕಿ ರಾಮಾಯಣದಲಿ ಇವೆ.

ಈ ಸೂಚನೆಗಳನ್ನು ಗ್ರಹಿಸಿ, ರಾವಣನ ಮನಸ್ಸನ್ನು ವಿಶ್ಲೇಷಿಸಿ ಅವನ ವ್ಯಕ್ತಿತ್ವದ ಬಹುಮುಖಗಳನ್ನೂ ಸಂಕೀರ್ಣತೆಯನ್ನೂ ಚಿತ್ರಿಸುವ ಕೆಲಸ ಮಾಡಿದವರು ಜೈನಕವಿಗಳು; ಅವರು ಹೊಸ ದರ್ಶನದ ಬೆಳಕಿನಲ್ಲಿ ರಾವಣನನ್ನು ಕಂಡು ಕಂಡರಿಸಿದರು. ಜೈನರಾಮಾಯಣದಲ್ಲಿ ವೈದೋರಿರುವ ನೂತನ ರಾವಣನನ್ನು 'ದುರಂತರಾವಣ'ನೆಂದು ಕರೆಯುವುದು ವಾಡಿಕೆ. ನಾಗಚಂದ್ರನಲ್ಲಿ ಈ ರಾವಣಪಾತ್ರ ಹೇಗೆ ರೂಪುಗೊಂಡಿದೆ ನೋಡಬಹುದು.

ನಾಗಚಂದ್ರನ ರಾವಣ ವಾಲ್ಮೀಕಿಯ ರಾವಣನಂತಲ್ಲದೆ ಮೂಲತಃ ಸದ್ಗುಣೋಪೇತನಾದ ಮಹಾಪುರುಷ ; ಅಂಥವನು ಕಾಲಕರ್ಮಸಂಯೋಗದಿಂದ ಅಲ್ಪ ದೌರ್ಬಲ್ಯ ವಶನಾಗಿ– ಆ ದೌರ್ಬಲ್ಯ ಆಕಸ್ಮಿಕವೆ ಹೊರತು ಸ್ವಭಾವ ಸಹಜವಾದುದಲ್ಲ– ವಿಧಿಸಂಕಲ್ಪ ಪ್ರೇರಿತನಾಗಿ ಪತನಾಭಿಮುಖನಾಗುತ್ತಾನೆ ; ನಮ್ಮ ಸಹಾನುಭೂತಿ ಅನುಕಂಪೆಗಳಿಗೆ ಭಾಜನನಾಗುತ್ತಾನೆ.

ಈ ರಾವಣ ಸತ್ಕುಲಪ್ರಸೂತ, ಜಿನಭಕ್ತ, ಅಹಿಂಸಾರತ, ಮಹಾಪರಾಕ್ರಮಿ. ಅವನು ವಾಸ್ತವವಾಗಿ ರಾಕ್ಷಸನಲ್ಲ ; ರಾಕ್ಷಸ ಎಂಬುದು ಅವನ ಪೂರ್ವಿಕರಲ್ಲೊಬ್ಬನ ಹೆಸರು. ಅವನು ಭಯಂಕರಾಕಾರನಲ್ಲ ; ದಶಕಂಠನೂ ಅಲ್ಲ–ಅದು ಅವನ ಒಂದು ಹೆಸರಷ್ಟೆ.

ರಾವಣ ತನ್ನ ಪೌರುಷವನ್ನು ಮೆರೆಯಲು ದಿಗ್ವಿಜಯ ಕೈಗೊಳ್ಳುತ್ತಾನೆಯೆ ಹೊರತು ಯಾರನ್ನೂ ಕೊಲ್ಲುವುದಕ್ಕಲ್ಲ. ತಾನು ಗೆದ್ದು ಸೆರೆಹಿಡಿದ ರಾಜರನ್ನೆಲ್ಲ ಅವನು ದಯೆಯಿಂದ

ಬಿಡುಗಡೆ ಮಾಡುತ್ತಾನೆ. ಸಹಸ್ರಬಾಹು, ಇಂದ್ರ, ನಳಕೂಬರ ಮೊದಲಾದವರು ಅವನಿಂದ ಪರಾಭವಗೊಂಡರೂ, ಅವನ ಗೌರವಾದರಗಳನ್ನು ಪಡೆಯುತ್ತಾರೆ. ಅವನು ಹೋದ ಕಡೆಯಲ್ಲೆಲ್ಲ ಯಜ್ಞಯಾಗಾದಿಗಳನ್ನು ತಪ್ಪಿಸಿ ಅಹಿಂಸೆಯ ಧ್ವಜವನ್ನೆತ್ತಿ ಹಿಡಿಯುತ್ತಾನೆ.

ಪರಾಂಗನಾವಿರತಿ ಎಂಬ ವ್ರತವನ್ನು ರಾವಣ ಕೈ ಹಿಡಿದ ವನು ; ಅವನ ಅಂತಃಪುರದ ಹೆಣ್ಣುಗಳೆಲ್ಲ ಅವನಿಗೆ ಒಲಿದು ಬಂದವರೆ ವಿನಾ ಅವನು ಬಲಾತ್ಕಾರದಿಂದ ತಂದವರಲ್ಲ. ನಳಕೂಬರನ ಪತ್ನಿ ಉಪರಂಭೆಯೆಂಬುವಳು ತಾನಾಗಿಯೆ ಒಲಿದು ಬಂದಾಗ, ಅವಳಿಗೆ ಸದುಪದೇಶ ನೀಡಿ ಅವಳ ಶೀಲವನ್ನು ಸಂರಕ್ಷಿಸಿ ಕಳುಹಿಸಿದುದು ಅವನ ಉದಾತ್ತ ಚರಿತಕ್ಕೆ ನಿದರ್ಶನ.

ಇಂತಹ ಮಹಾಸತ್ತ್ವನ ಬದುಕಿನಲ್ಲಿ ವಿಧಿ ಪ್ರವೇಶಿಸುತ್ತದೆ ; ಅವನ ಅಧಃಪತನಕ್ಕೆ ಸಂಚು ಹೂಡುತ್ತದೆ. “ ದೈವ ಘಟನೆ ಯಿಂದಾಗದುದೇಂ ? ” ಇನ್ನು ಮೊದಲಾಗುತ್ತದೆ ರಾವಣನ ಬೀಳಿನ ದುರಂತ ಕಥೆ. “ ಅಂಥ ಸುಸಜ್ಜಿತವಾದ ನಾವೆಯೂ ಯಾವುದೋ ಒಂದು ಅಲ್ಪದೋಷದಿಂದ ವಿಧಿಯ ಮುಸಕಕ್ಕೆ ತುತ್ತಾಗುವುದನ್ನು ನೋಡಿ ವಿಸ್ಮಿತರಾಗುತ್ತೇವೆ.”

“ ಲಂಕಾನಾಥಂ ಜಾನಕಿಯ ದೂಸಱಿಂ ದಾಶರಥಿಯ ಕೈಯೊಳ್ ಮಡಿಗುಂ ’’ ಎಂಬ ಭವಿಷ್ಯವನ್ನು ನೈಮಿತ್ತಿಕ ರಿಂದರಿತ ವಿಭೀಷಣ “ ಕಾರಣ ವಿಘಟನಮೆ ಕಾರ್ಯವಿಘಟನಂ ” ಎಂದು ಜನಕ, ದಶರಥರ ವಧೆಗೆ ಯತ್ನಿಸುತ್ತಾನೆ. ಅವರು ನಾರದನಿಂದ ವಿಷಯವನ್ನರಿತು ತಲೆಮರೆಸಿಕೊಳ್ಳುತ್ತಾರೆ. ರಾವಣನ ದುರಂತಕ್ಕೆ ಬೀಜಾವಾಪನವಾಗುತ್ತದೆ.

ತನ್ನ ತಂಗಿಯ ಮಗನಾದ ಶಂಬೂಕ ಹತನಾದುದನ್ನು ಕೇಳಿ ಕುಪಿತನಾದ ರಾವಣ ರಾಮಲಕ್ಷ್ಮಣರನ್ನು ಸಂಹರಿಸಬೇಕೆಂದು ದಂಡಕಾರಣ್ಯಕ್ಕೆ ಬರುತ್ತಾನೆ. ಸೀತೆಯನ್ನು ಅಪಹರಿಸಬೇಕೆಂಬ ಯೋಚನೆ ಅವನಿಗಿರುವುದಿಲ್ಲ; ಸೀತೆಯನ್ನು ನೋಡುವ ತನಕ ಅವಳ ವಿಷಯವೆ ಅವನಿಗೆ ಗೊತ್ತಿರುವುದಿಲ್ಲ. ಆದರೆ ಜಾನಕಿಯ ರೂಪರಾಶಿಯನ್ನು ಕಂಡೊಡನೆಯೆ ಅವನು ಥಟ್ಟನೆ ಮೋಹಪರವಶನಾಗುತ್ತಾನೆ. ಹಿಂದೆಂದೂ ಪರಸತಿಗೆ ಮನಸೋಲದವನು ಸೀತೆಗೆ ಮರುಳಾಗುತ್ತಾನೆ: ''ಅಬ್ಧಿಯುಂ ಒರ್ವರ್ ಕಾಲವಶದಿಂ ಮರ್ಯಾದೆಯಂ ದಾಂಟದೇ?'' ಅವನಲ್ಲಿದ್ದ ಅವಲೋಕಿನೀ ವಿದ್ಯೆ ವಿವೇಕ ಹೇಳುತ್ತದೆ; ಅವನಿಗದು ಪಥ್ಯವಾಗುವುದಿಲ್ಲ. ಆ ವಿದ್ಯೆಯ ಬಲದಿಂದ ರಾಮನನ್ನು ದೂರಮಾಡಿ ಸೀತೆಯನ್ನು ಕದ್ದೊಯ್ಯುತ್ತಾನೆ. ಅಡ್ಡಲಾದ ಜಟಾಯುವಿನ ರೆಕ್ಕೆಗಳನ್ನು ಛೇದಿಸುತ್ತಾನೆ; ಹಾದಿಯಲ್ಲಿ ರತ್ನಜಟಿಯನ್ನು ಹಿಂಸಿಸುತ್ತಾನೆ; ಪಾಪದಿಂದ ಪಾಪಕ್ಕೆ ದಾಟುತ್ತಾನೆ. "ಸಿಡಿಲ ಆಘಾತದಿಂದ ಗಿರಿ ಶಿಖರದ ಮಹಾಗ್ರಾವವು ಆಯತಪ್ಪಿ ಅಡ್ಡಬಂದ ಬಂಡೆಗಳನ್ನಪ್ಪಳಿಸಿ ಮರ ಬಳ್ಳಿಗಳನ್ನು ನುಗ್ಗುನುರಿಮಾಡಿ ಅಗಾಧ ಕಂದರಾಭಿಮುಖವಾಗುವಂತೆ ರಾವಣ ಅಧೋಗತಿಯಲ್ಲಿ ಕಾಲಿಟ್ಟನು."

ಸೀತೆಯನ್ನು ಅವನು ಪ್ರಮದವನದಲ್ಲಿ ಸೆರೆಯಿಡುತ್ತಾನೆ; ಅವಳನ್ನು ಒಲಿಸಿಕೊಳ್ಳಲು ಮಾಡಿದ ಪ್ರಯತ್ನಗಳು ವಿಫಲವಾಗುತ್ತವೆ.

ಮುಂದೆ ರಾಮಸೈನ್ಯ ಲಂಕೆಯನ್ನು ಮುತ್ತುತ್ತದೆ. ನಡೆದ ಸಮರದಲ್ಲಿ ರಾವಣನ ತಮ್ಮ ಕುಂಭಕರ್ಣನೂ ಮಕ್ಕಳಾದ ಇಂದ್ರಜಿತ್ ಮೇಘವಾಹನರೂ ಸೆರೆಸಿಕ್ಕುತ್ತಾರೆ. ವಿಜಯಕ್ಕಾಗಿ

ರಾವಣ ಬಹುರೂಪಿಣೀವಿದ್ಯೆಯನ್ನು ಸಾಧಿಸಲು ಜಿನಾಲಯ ದಲ್ಲಿ ಅನನ್ಯ ಭಕ್ತಿಯಿಂದ ಪೂಜಾಮಗ್ನನಾಗುತ್ತಾನೆ ಆ ವಿದ್ಯೆ ಪ್ರತ್ಯಕ್ಷವಾಗಿ ರಾಮಲಕ್ಷ್ಮಣರನ್ನು ಮಾತ್ರ ತಾನು ಕೊಲ್ಲ ಲಾರೆನೆಂದು ಹೇಳುತ್ತದೆ. ಆದರೆ ರಾವಣ ಎದೆಗುಂದದೆ ಯುದ್ಧಸನ್ನದ್ಧನಾಗುತ್ತಾನೆ. ಅದಕ್ಕೆ ಮುನ್ನ ಸೀತೆಯನ್ನು ನೋಡಲು ಹೋಗುತ್ತಾನೆ. ತನಗೆ ಬಹುರೂಪಿಣೀವಿದ್ಯೆ ಸಿದ್ಧಿಸಿರುವುದಾಗಿಯೂ ಅದರಿಂದ ರಾಮ ಲಕ್ಷ್ಮಣರನ್ನು ಕೊಲ್ಲುವುದಾಗಿಯೂ ತನಗವಳು ಒಲಿಯಬೇಕೆಂದೂ ಹೇಳು ತ್ತಾನೆ. ಸೀತೆ ದುಃಖಭರದಿಂದ ಮೂರ್ಛೆ ಹೋಗುತ್ತಾಳೆ.

ಸೀತೆಯ ಆ ಮನೋದಾರ್ಢ್ಯವನ್ನೂ ದೀನಾವಸ್ಥೆಯನ್ನೂ ನೋಡಿದ ರಾವಣನ ಚಿತ್ತ ಪರಿವರ್ತನೆಗೊಳ್ಳುತ್ತದೆ; ಮಾಡಿದ ಅಕಾರ್ಯಕ್ಕಾಗಿ ತೀವ್ರ ಪಶ್ಚಾತ್ತಾಪದಗ್ಧವಾಗುತ್ತದೆ. ಸೀತೆಯ ಮೇಲಿನ ದುರ್ಮೋಹ ತೊಲಗಿ, ವಿವೇಕೋದಯವಾಗುತ್ತದೆ, ವಿರಕ್ತಿ ಜನಿಸುತ್ತದೆ. ಅವನು ಆತ್ಮನಿಂದೆ ಮಾಡಿಕೊಂಡು ಪರಿಶುದ್ಧ ಹೃದಯನಾಗುತ್ತಾನೆ ಸೀತೆಯನ್ನು ರಾಮನಿಗೆ ಒಪ್ಪಿಸಬೇಕೆಂದು ತೀರ್ಮಾನಿಸುತ್ತಾನೆ.

ಆದರೆ ಸೀತೆಯನ್ನು ಕರೆದುಕೊಂಡು ಹೋಗಿ ಒಪ್ಪಿಸುವುದು ಅವನ ಅಭಿಮಾನಕ್ಕೆ ಕುಂದಾಗಿ ತೋರುತ್ತದೆ. ಕ್ಷಾತ್ರ ಧರ್ಮಕ್ಕೆ ಚ್ಯುತಿ ಬರದಂತೆ ಅವಳನ್ನು ಹಿಂದಿರುಗಿಸಬೇಕೆಂಬ ಛಲ ಅವನದು. ಎಂತಲೇ ಯುದ್ಧಮುಖದಲ್ಲಿ ರಾಮ ಲಕ್ಷ್ಮಣರನ್ನು ಸೆರೆಹಿಡಿದು ತಂದು ಸೀತೆಯನ್ನು ಕೊಡುವುದಾಗಿ ದೃಢನಿಶ್ಚಯ ಮಾಡುತ್ತಾನೆ. ಆದರೆ ಯುದ್ಧದಲ್ಲಿ ಅವರನ್ನು ಗೆಲ್ಲಲಾರದೆ ತಾನೆ ಲಕ್ಷ್ಮಣನಿಂದ ಹತನಾಗುತ್ತಾನೆ. ವಿಧಿ

ಅವನನ್ನು ಕೊಂದು ಕೂಗುತ್ತದೆ. ಅದನ್ನು ಕಂಡು ಸಹೃದಯರ ಮನಸ್ಸು ಸಕರುಣವಿಸ್ಮಯದ ಭಂಗಿಯಲ್ಲಿ ನಿಲ್ಲದಿರದು.

ಸಕಲಗುಣಸಂಪನ್ನನಾಗಿದ್ದೂ ಒಂದು ಸಣ್ಣ ದೋಷದಿಂದ ಜಾರಿಬಿದ್ದ ರಾವಣನನ್ನು ಇಲ್ಲಿ ನೋಡುತ್ತೇವೆ ಆದರೆ ಅವನನ್ನು 'ದುರಂತರಾವಣ' ಎನ್ನಬಹುದೇ ಎಂಬುದು ವಿಚಾರಾರ್ಹ. ಅವನು ದೌರ್ಬಲ್ಯಕ್ಕೆ ಒಮ್ಮೆ ತುತ್ತಾದುದು ನಿಜ; ಆದರೆ ಆ ದೌರ್ಬಲ್ಯ ಕಡೆಯತನಕ ನಿಲ್ಲಲಿಲ್ಲ. ನಡು ವೆಯೆ ಅವನು ಎಚ್ಚತ್ತುಕೊಂಡು ಪರಿವರ್ತಿತನಾಗಿ ಸನ್ಮಾರ್ಗ ಗಾಮಿಯಾದುದನ್ನು ಕಾಣುತ್ತೇವೆ. ಅವನ ಸಾವು ವಿನಾಶ ವಲ್ಲ, ದುರಂತವಲ್ಲ; ಅವನು ಸತ್ತೂ ಬದುಕಿದಂತೆಯೆ. ಒಂದು ರೀತಿಯಿಂದ ಮಂಗಳಾಂತವೆ ಆಗಿರುವ ಈ ರಾವಣ ಪಾತ್ರವನ್ನು 'ದುರಂತ'ವೆಂದು ಕರೆಯುವುದು ಉಚಿತ ವೆನಿಸುವುದಿಲ್ಲ. ಪಂಪರನ್ನರ ದುರ್ಯೋಧನನಿಗೂ ನಾಗಚಂದ್ರನ ರಾವಣನಿಗೂ ಅಂತರವಿರುವುದನ್ನು ಗಮನಿಸಬೇಕು.

ಇತರ ಕೆಲವು ಪಾತ್ರಗಳು: ಪಂಪರಾಮಾಯಣದಲ್ಲಿ ಬರುವ ಇತರ ಮುಖ್ಯ ಪಾತ್ರಗಳನ್ನು—ರಾಮ, ಲಕ್ಷ್ಮಣ, ಸೀತೆ— ಸ್ಥೂಲವಾಗಿ ನೋಡಬಹುದು.

(೧) ರಾಮ ಎಂಟನೆಯ ಬಲದೇವ; ಚರಮದೇಹಧಾರಿ; ಈ ಜನ್ಮದಲ್ಲಿ ಮೋಕ್ಷ ಪಡೆಯತಕ್ಕವನು. ಈ 'ಉದಾತ್ತ ರಾಘವ'ನೆ ಕಥಾನಾಯಕ. ಇವನು ಸತ್ಯಧರ್ಮಪರಾಯಣ, ಜಿನಭಕ್ತ, ವಿನಯನಿಧಿ. "ಈ ಮಹಾಸತ್ವನಪ್ಪ ರಘುವೀರನ್ ಅನಾಚಾರಮಂ ಎಂತುಂ ಒಲ್ಲನಲ್ಲ.''

ದಶರಥ ತನಗೆ ರಾಜ್ಯಭಾರವನ್ನು ವಹಿಸುವುದಾಗಿ ತಿಳಿಸಿ ದಾಗ, ತಾನಿನ್ನೂ ಚಿಕ್ಕವನೆಂದು ಅದನ್ನು ನಿರಾಕರಿಸುವಲ್ಲಿ

ರಾಮನ ನಿಷ್ಪ್ರತಿ ವ್ಯಕ್ತವಾಗುತ್ತದೆ. ದಶರಥ ಕೈಕೆಗೆ ಕೊಟ್ಟಿದ್ದ ವಾಗ್ದಾನವನ್ನು ನೆರವೇರಿಸಲು ಅವನು ಸಂತಸದಿಂದ ವನವಾಸಕ್ಕೆ ಸಿದ್ಧನಾಗುತ್ತಾನೆ. "ಮಗನೆನಿಪಂಗೆ ಮಾತ್ರ ಪಿತೃಭಕ್ತಿಯೆ ಕೃತ್ಯಂ, ಇಹತ್ರೆಗಂ ಪರತ್ರೆಗಂ ಉಪಕಾರಿ ಬೇಱಿತೆ ಪೆಱತಾವುದೊ ಚಾರುಚರಿತ್ರಂ?" ಎಂಬುದು ಅವನ ನಿಲುವು. ಭರತನಿಗೆ ರಾಜ್ಯವನ್ನು ಕೊಟ್ಟಾಗ ಅವನ ಮುಖ 'ಹರ್ಷಕ್ಕೆ ತಾಯ್ಮನೆ'ಯಾಗುತ್ತದೆ.

ರಾಮ ಕರುಣಾಳು; ಮರೆಹೊಕ್ಕವರನ್ನು ಕಾಪಾಡುವುದು ತನ್ನ ಧರ್ಮವೆಂದೆ ಭಾವಿಸುತ್ತಾನೆ. "ಅರ್ಥಿಗಳಂ ಮನ್ನಿಸುವ ಅಱ್ತಿ ರಾಘವಂಗೆ ನಿಸರ್ಗಂ." ಹಗೆಗಳ ವಿಷಯದಲ್ಲಿ ಕೂಡ ಅವನು ಅನುಚಿತವಾಗಿ ನಡೆದುಕೊಳ್ಳುವುದಿಲ್ಲ. ರಾವಣ ಜಿನಮಂದಿರದಲ್ಲಿ ಪೂಜಾನಿರತನಾಗಿರುವಾಗಲೆ ಅವನನ್ನು ನಿಗ್ರಹಿಸಬೇಕೆಂದು ವಿಭೀಷಣಾದಿಗಳು ಹೇಳಿದಾಗ, ರಾಮ ಅದನ್ನೊಡಂಬಡದೆ ಹೇಳುತ್ತಾನೆ:

> ವನಿತೆಗೆ ಕೈದುವಂ ಬಿಸುಟವಂಗಿದಿರಾಗದವಂಗೆ ಭೂಭುಜಂ
> ಮುನಿವುದು ಪಾಡಿಯಲ್ತು ನಿಯಮಸ್ಥಿತನಾಗಿ ದಶಾನನಂ ಜಿನೇಂ
> ದ್ರನ ಮಱೆವೊಕ್ಕು ಸಾಧಿಸಿದಪಂ ಗಡ ವಿದ್ಯೆಯನೆಂತೊ ಬಾಧೆಯಂ
> ಜನಿಯಿಪುದಾತನೊಳ್ ಬಿಸುಡತಕ್ಕುದನಿಂತುಸಿರಲ್ಕೆ ತಕ್ಕುದೇ

ಸೀತೆಯಲ್ಲಿ ಅವನಿಗೆ ಅತಿಶಯವಾದ ಪ್ರೀತಿ. ಅವಳನ್ನು ಕಳೆದುಕೊಂಡಾಗ ಶೋಕಾರ್ತನಾಗಿ ಮತಿವಿಕಲನಂತೆ ವರ್ತಿಸುತ್ತಾನೆ. ಅವನ ಭ್ರಾತೃಪ್ರೇಮವೂ ಗಾಢವಾದುದು. ಕಡೆಯಲ್ಲಿ ಲಕ್ಷ್ಮಣ ಮರಣಿಸಿದಾಗ ಅವನ ಶವವನ್ನು ಆರು ತಿಂಗಳು ಹೊತ್ತು ತಿರುಗುತ್ತಾನೆ. ಬಳಿಕ ವಿರಕ್ತನಾಗಿ ದೀಕ್ಷೆ ಪಡೆದು ತಪಸ್ಸುಮಾಡಿ ರಾಮಭಟ್ಟಾರಕನಾಗುತ್ತಾನೆ.

(೨) ಲಕ್ಷ್ಮಣ ಎಂಟನೆಯ ನಾರಾಯಣ; ಕಥಾನಾಯಕ ನಲ್ಲವಾದರೂ ಉದ್ದಕ್ಕೂ ಎದ್ದು ಕಾಣುವ ಪಾತ್ರ. "ರಾಮನು ಮೂಲಮೂರ್ತಿಯಾದರೆ ಲಕ್ಷ್ಮಣನು ಉತ್ಸವಮೂರ್ತಿ". ಈತ ಮಹಾವೀರ; ರಾಮನಿಗೆ ರಾಜ್ಯ ತಪ್ಪಿಹೋಗುವ ಸಂದರ್ಭದಲ್ಲಿ ಅವನ ಶೌರ್ಯೋನ್ನತಿ ಗೋಚರಿಸುತ್ತದೆ.

ಕಾರಾಗಾರದೊಳಿಂದ್ರನಂ ಸೆರೆಯಿಡಲ್ ಗೋತ್ರಾದ್ರಿಯಂ
ಚಾಳಿಸಲ್
ತಾರಾಮಂಡಲಮಂ ನೆಲಕ್ಕೆ ನೆಲನಂ ವ್ಯೋಮಕ್ಕೆ ಪಕ್ಕಾಗಿಸಲ್
ಪಾರಾವಾರದ ನೀರನೀಂಟಲಖಿಳಾಶಾದಂತಿದಂತಂಗಳಂ
ಬೇರಿಂದಂ ಕಿಳಲಂದವೇಂ ಬಗೆದನೋ ರಕ್ತೇಕ್ಷಣಂ ಲಕ್ಷ್ಮಣಂ

ಅಣ್ಣನಾದ ರಾಮನಲ್ಲಿ ಅವನಿಗೆ ಪರಮಭಕ್ತಿ; ಎಂತಲೆ ರಾಮನಿಗೆ ವಿಧೇಯನಾಗಿ ಅವನೊಡನೆ ವನವಾಸಕ್ಕೆ ತೆರಳು ತ್ತಾನೆ. ಉದ್ದಕ್ಕೂ ಅನೇಕ ಪ್ರಸಂಗಗಳಲ್ಲಿ ಅಸಮ ಪೌರುಷ ವನ್ನು ಮೆರೆಯುತ್ತಾನೆ. ಆದರೆ ಧರ್ಮವನ್ನು ಮರೆತವನಲ್ಲ. ಅರಿಯದೆ ಶಂಬುಕನನ್ನು ಕೊಂದುದರಿಂದಾಗಿ ಪಶ್ಚಾತ್ತಾಪ ಪಡುತ್ತಾನೆ.

ಸಿದ್ಧಶೈಲವನ್ನು ಎತ್ತಿದವರ ಕೈಯಲ್ಲಿ ರಾವಣನಿಗೆ ಮರಣ ವೆಂದು ಯತಿಯೊಬ್ಬರು ಹೇಳಿರುತ್ತಾರೆ. ಲಕ್ಷ್ಮಣ "ದಶಗ್ರೀವನ ಕಂಠಕಂದಳದ ಬೇರಂ ಕೀಳ್ವವೊಲ್" ಆ ಶೈಲವನ್ನು ಮೇಲೆತ್ತುತ್ತಾನೆ. ರಾವಣನನ್ನು ಕೊಲ್ಲುವವನು ಅವನೇ; ಅದಕ್ಕಾಗಿಯೇ ಅವನು ಜನ್ಮವೆತ್ತಿದ್ದು.

ಸೀತೆಯಲ್ಲಿ ಲಕ್ಷ್ಮಣನಿಗೆ ಬಹಳ ಭಕ್ತಿ, ಗೌರವ. ಅವಳ ಸಚ್ಚಾರಿತದಲ್ಲಿ ಅವನಿಗೆ ಅಚಲ ವಿಶ್ವಾಸ. ಆದ್ದರಿಂದಲೆ ಸೀತಾ ಪರಿತ್ಯಾಗದ ಸಂದರ್ಭದಲ್ಲಿ ರಾಮನನ್ನು ಆಕ್ಷೇಪಿಸುತ್ತಾನೆ.

ರಾಮಲಕ್ಷ್ಮಣರ ಅನ್ಯೋನ್ಯ ಪ್ರೇಮವನ್ನು ಪರೀಕ್ಷಿಸು ವುದಕ್ಕಾಗಿ ಇಬ್ಬರು ದೇವತೆಗಳು ಅಯೋಧ್ಯೆಗೆ ಬಂದು ತಮ್ಮ ವಿದ್ಯಾಶಕ್ತಿಯಿಂದ ರಾಮ ಮೃತನಾಗುವಂತೆ ಮಾಡುತ್ತಾರೆ. ಆಗ ಲಕ್ಷ್ಮಣ ಸೋದರವಿಯೋಗದಿಂದ ಕ್ಷಣಮಾತ್ರದಲ್ಲಿ ಪ್ರಾಣ ಬಿಡುತ್ತಾನೆ. ಅವನಿಗೆ ಈ ಜನ್ಮದಲ್ಲಿ ಮುಕ್ತಿಯಿಲ್ಲ; ನರಕಕ್ಕೆ ಹೋಗಿ, ಮುಂದೆ ಸದ್ಗತಿ ಪಡೆಯುತ್ತಾನೆ.

(೩) ಸೀತೆ ಪರಮಪತಿವ್ರತೆ; “ಅಪ್ರತಿಮ ಪತಿವ್ರತಾಚರಣ ಭೂಷಣಭೂಷಿತೆ”. ಅವಳ ಶೀಲ ರಾವಣನೊಡ್ಡಿದ ಹಲವು ಪ್ರಲೋಭನಗಳನ್ನು ಗೆದ್ದು ಮೇರುದೃಢವಾಗಿ ನಿಲ್ಲುತ್ತದೆ. ರಾವಣ ತನ್ನನ್ನು ಕದ್ದೊಯ್ಯುವಾಗ ಅವಳು ‘‘ತನ್ನ ಚಿತ್ತದೊಳ್ ನೆಲಸಿದ ರಾಮನಂ ಬಯಸಿ’’ ಬಾಹ್ಯದರ್ಶನಕ್ಕಲಸಿ ಕಣ್ಮುಚ್ಚುತ್ತಾಳೆ. ರಾವಣ ತನ್ನ ಅನುರಾಗವನ್ನು ಪ್ರಕಟಿಸಿದಾಗ “ನೀನೆನ್ನಂ ಸೋಂಕಿದೊಡೆ ನಾಲಗೆ ಕಿತ್ತು ಸಾವೆನ್” ಎಂದು ನುಡಿಯುತ್ತಾಳೆ; ರಾಮನ ಕುಶಲವನ್ನು ತಿಳಿಯುವವರೆಗೆ ನಿರಶನವ್ರತ ಪಾಲಿಸುವುದಾಗಿ ಪ್ರತಿಜ್ಞೆ ಸುತ್ತಾಳೆ. “ಸಜ್ಜನಿಕೆ ಗಿಂತು ಸೋಂತರುಮೊಳರೇ?” ಮಂಡೋದರಿ—ಅವಳಿಲ್ಲಿ ಅಧಃಪತನ ಹೊಂದಿದ್ದಾಳೆ—ಬಂದು ರಾವಣನಿಗೊಲಿಯುವಂತೆ ಪುಸಲಾಯಿಸಿದಾಗ, “ತನಗೆ ಪತಿವ್ರತವಿಲ್ಲದ ವನಿತೆ ಕುಲಸ್ತ್ರೀಯೆ? ಇಂತಪ್ಪ ಅನುಚಿತಮಂ ಹರಿವಂಶದ ವನಿತೆ ಯರೊಳ್ ನುಡಿಯಲಕ್ಕುಮೇ ನಿಮ್ಮನ್ನರ್?” ಎಂದು ಧಿಕ್ಕರಿಸುತ್ತಾಳೆ. “ಗುಣಹೀನರ ಸಿರಿಯಿಂ ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೆ ?’’ ಎಂಬುದೇ ಅವಳ ನಿಶ್ಚಲವಾದ ನಂಬಿಕೆ.

ರಾವಣ ಸೀತೆಯನ್ನು ಅನುನಯದಿಂದ ವಶಪಡಿಸಿಕೊಳ್ಳ

ಲಾರದೆ ಬೆದರಿಕೆಯಿಂದ ಒಲಿಸಿಕೊಳ್ಳಬೇಕೆಂದು ಘೋರ ಭಯಂಕರವಾದ ದೃಶ್ಯಗಳನ್ನು ಸೃಜಿಸಿದಾಗಲೂ ಅವಳು ವಿಚಲಿತಳಾಗುವುದಿಲ್ಲ; ಜಿನನಿಷ್ಠೆಯಿಂದ ಅಪೂರ್ವವಾದ ಧೃತಿಯನ್ನು ತೋರುತ್ತಾಳೆ. ಅವನು ಬಹುರೂಪಿಣೀ ವಿದ್ಯೆಯನ್ನು ಸಾಧಿಸಿ ತನ್ನ ಬಳಿಗೆ ಬಂದಾಗ, ರಾಮಲಕ್ಷ್ಮಣರಿಗೇನಾಯಿತೋ ಎಂದು ತಲ್ಲಣಿಸಿ, ಮೂರ್ಛಿತೆಯಾಗುತ್ತಾಳೆ.

ಲಕ್ಷ್ಮಣನಲ್ಲಿ ಅವಳಿಗೆ ಬಹಳ ಅಕ್ಕರೆ. ರಾವಣ ವಧೆಯಾದ ಮೇಲೆ ರಾಮಲಕ್ಷ್ಮಣರು ಬಂದಾಗ ''ಮನ್ನಿಮಿತ್ತದಿಂ ಕರಂ ಸೇದೆವಟ್ಟಿರ'' ಎನ್ನುತ್ತಾಳೆ.

ಸೀತೆಗೂ ಜಿನಧರ್ಮದಲ್ಲಿ ಶ್ರದ್ಧೆ; ಅವಳು 'ಜಿನಾಗಮ ಕೋವಿದೆ'. ರಾಮನಿಗೆ "ಅರ್ಹತ್ಪರಮೇಶ್ವರ ಶ್ರೀಧರ್ಮಮಂ ಬಿಸುಡದಿರ್ಪುದು ಎನಗೆ ದಯೆಗೆಯ್ವೊಡೆ" ಎಂದು ಸಂದೇಶ ಕಳುಹುತ್ತಾಳೆ. ತನಗೆ ಅಗ್ನಿಪರೀಕ್ಷೆಯಾದ ಮೇಲೆ ಸಂಸಾರಕ್ಕೆ ಹೇಸಿ ''ಕೇಡುಳ್ಳ ಸಂಸಾರದೊಳಪ್ಪುದೇಂ ಕೇಡಿಲ್ಲದ ಮೋಕ್ಷಸುಖಕ್ಕೆ ಶಾಶ್ವತಮಪ್ಪ ತಪಮಂ ಕೈಕೊಳ್ವೆಂ'' ಎಂದು ದೀಕ್ಷೆಗೊಳ್ಳುತ್ತಾಳೆ.

ನಾಗಚಂದ್ರನ ಅಪೂರ್ವತೆ: ''ಅಪೂರ್ವಮೆನೆ ರಾಮಕಥೆಯನಭಿವರ್ಣಿಸುವೆಂ'' ಎಂದು ಹೇಳಿಕೊಂಡಿದ್ದಾನೆ. ನಾಗಚಂದ್ರ. ಅವನಿಗೆ ಮೂಲ ವಿಮಲಸೂರಿಯ ರಾಮಾಯಣವಾದುದರಿಂದ, ಅವನ ಕೃತಿಯ ಅಪೂರ್ವತೆಯೇನೆಂಬುದನ್ನು ಅರಿಯಬೇಕಾದರೆ ವಿಮಲಸೂರಿಯೊಡನೆ ಹೋಲಿಸಿ ನೋಡಬೇಕಾಗುತ್ತದೆ.

ನಾಗಚಂದ್ರನ ರಾಮಾಯಣ ವಿಮಲಸೂರಿಯ 'ಪಉಮ ಚರಿಯ'ವನ್ನು ಅವಲಂಬಿಸಿದ್ದರೂ ಅದರ ಪಡಿಯಚ್ಚಲ್ಲ,

ನೆರಳಲ್ಲ, ಭಾಷಾಂತರವಲ್ಲ. ವಿಷಯ ವಿಮಲಸೂರಿಯದಾದರೂ ರೀತಿ ನಾಗಚಂದ್ರನದು; ದರ್ಶನ ಅವನದಾದರೂ ಅದರ ಪ್ರದರ್ಶನ ಇವನದು. ಕಥಾ ಸಂವಿಧಾನದಲ್ಲಿ, ಪಾತ್ರಕಲ್ಪನೆಯಲ್ಲಿ ವಿಮಲಸೂರಿಯನ್ನು ನಾಗಚಂದ್ರ ಅನುವರ್ತಿಸಿದ್ದರೂ ತನ್ನ ಪ್ರತಿಭಾವಿಲಾಸಕ್ಕೆ ಕಲಾಕೌಶಲಕ್ಕೆ ಸ್ವೋಪಜ್ಞತೆಗೆ ವಿಪುಲವಾಗಿ ಅವಕಾಶ ಕಲ್ಪಿಸಿಕೊಂಡಿದ್ದಾನೆ. ಕಥೆಯಲ್ಲಿ ಅಪೂರ್ವತೆಯಿಲ್ಲದಿದ್ದರೂ ವರ್ಣನೆಯಲ್ಲಿ, ರಸಾವಿಷ್ಕಾರದಲ್ಲಿ ಅವನು ಹೇಗೆ ತನ್ನತನವನ್ನು ಮೆರೆಯಬಲ್ಲ ಎಂಬುದಕ್ಕೆ ಇಲ್ಲಿ ಒಂದೇ ಒಂದು ನಿದರ್ಶನ ನೋಡಬಹುದು. ರಾಮಸೀತೆಯರಿಗೆ ಜನಕ ಕೈನೀರೆರೆದು ಮದುವೆಮಾಡಿಕೊಟ್ಟದ್ದು ಎಲ್ಲ ರಾಮಾಯಣಗಳಲ್ಲೂ ಬರತಕ್ಕ ಸಂಗತಿಯೇ; ಆದರೆ ಆ ಒಂದು ಕ್ಷಣದ ಉದಾತ್ತ ಭವ್ಯ ಚಿತ್ರವನ್ನು ನಾಗಚಂದ್ರನಂತೆ ಯಾವ ಕವಿ ಕೊಟ್ಟಿದ್ದಾನೆ?—

> ಜಗತೀ ಜಂಗಮಕಲ್ಪವೃಕ್ಷನಿದೆ ಕಯ್ವಂದತ್ತೆನಲ್ ಬಾಹುಶಾ
> ಖೆಗಳೊಳ್ ಪೊಂಗಳಸಂ ಮನಂಗೊಳಿಸೆ ಭೂಪಂ ತನ್ನ ಸಂತಾನವೃ
> ದ್ಧಿಗೆ ಪೊಯ್ನೀರೆಱೆವಂತೆ ಹರ್ಷಪುಲಕಂ ಕಯ್ಗಣ್ಮೆ ಹರ್ಷಾಳ್ರು ಕ
> ಯ್ಮಿಗೆ ಕಯ್ನೀರೆಱೆದಂ ಪಳಂಚೆ ದೆಸೆಯಂ ಮಾಂಗಲ್ಯತೂರ್ಯಸ್ವನಂ

ವಿಮಲಸೂರಿಯ ‘ಪಉಮಚರಿಯ’ ಪ್ರಧಾನವಾಗಿ ‘ಪುರಾಣ’; ಅದೊಂದು ಗೊಂಡಾರಣ್ಯ. ಅದನ್ನು ಪರಿಷ್ಕರಿಸಿ ಒಂದು ಉಪವನವನ್ನಾಗಿಮಾಡುವ ಜವಾಬ್ದಾರಿ ನಾಗಚಂದ್ರನ ಮೇಲೆ ಬಿದ್ದಿತು; “ಪಿರಿದೆನಿಸಿರ್ದ ರಾಮಕಥೆಯಂ ಕಿಱಿದಾಗಿರೆ” ಹೇಳುವ ಸವಾಲು ಅವನಿಗೊಡ್ಡಿನಿಂತಿತು. ಅದನ್ನವನು ಯಶಸ್ವಿಯಾಗಿ ಎದುರಿಸಿದ್ದಾನೆ; ಪ್ರಶಂಸನೀಯವಾದ ಸಂಗ್ರಹಗುಣವನ್ನು ತೋರಿದ್ದಾನೆ. ಮೂಲದಲ್ಲಿ ಬರುವ ಧರ್ಮೋಚಿತವಾದ

ಆಖ್ಯಾನ ಉಪದೇಶ ವರ್ಣನೆ ವಿವರಗಳ 'ಸೀಗೆಯಬೇಲಿ'ಯನ್ನು ಕತ್ತರಿಸಿ ತನ್ನ ಕಾವ್ಯ ಪ್ರಮುಖವಾಗಿ ಒಂದು ಕಲಾಕೃತಿಯಾಗುವಂತೆ ಎಚ್ಚರಿಕೆ ವಹಿಸಿದ್ದಾನೆ. ಯಾವುದನ್ನು ಬಿಡಬೇಕು, ಯಾವುದನ್ನು ಹಿಗ್ಗಿಸಬೇಕು, ಯಾವುದನ್ನು ಕುಗ್ಗಿಸಬೇಕು ಎಂಬ ಪ್ರಮಾಣ ಪ್ರಜ್ಞೆ ಅವನಲ್ಲಿದೆ. ಹೀಗಿದ್ದೂ ಅವನ ಕೃತಿಯಲ್ಲಿ 'ಪುರಾಣ'ದ ಅಂಶಗಳು ಉಳಿದಿರುವುದು ಅನಿವಾರ್ಯ, ಸಹಜ. ಏಕೆಂದರೆ, ಪುರಾಣತ್ವ ಅವನ ಉದ್ದೇಶದ ವಲಯದೊಳಗೇ ಇದೆ. ತನ್ನ ಕಾವ್ಯದಲ್ಲಿ ''ಜಗಮಂ ಯುಗಮಂ ಮನ್ವಾದಿಗಳಂ ಕಾಲ ಸ್ವರೂಪಮಂ ಜಿನರಂ....'' ವರ್ಣಿಸುವುದಾಗಿ ಅವನು ಬಾಯಿಬಿಟ್ಟು ಹೇಳಿದ್ದಾನೆ. ಆದರೆ ಅಷ್ಟಾದಶ ವರ್ಣನೆಗಳಲ್ಲಿ ಮೂಲವನ್ನೂ ಮೀರಿಸಿದ್ದಾನೆ.

ವಿಮಲಸೂರಿಯಲ್ಲಿ ಬರುವ ಅನೇಕ ಶುಷ್ಕವಾದ, ಪೇಲವವಾದ ಭಾಗಗಳಿಗೆ ನಾಗಚಂದ್ರ ಜೀವವನ್ನೂ ಬಣ್ಣವನ್ನೂ ತುಂಬಿ ಉಜ್ವಲಗೊಳಿಸಿದ್ದಾನೆ; ಮೂಲದ ಮಂಕನ್ನು ಎಷ್ಟೋ ಕಡೆ ಬೆಳಗಿದ್ದಾನೆ. ಅಲ್ಲದೆ, ಮೂಲದ ಸೌಂದರ್ಯವನ್ನು ಎಷ್ಟೋಕಡೆ ಪುಷ್ಟೀಕರಿಸಿದ್ದಾನೆ. ಆದರೆ ಮೂಲದ ಸೌಂದರ್ಯ ಅವನಲ್ಲಿ ಮರೆಯಾಗಿರುವ ಸಂದರ್ಭಗಳೂ ಉಂಟು. ನಿದರ್ಶನಕ್ಕೆ, ಸಹಸ್ರ ಬಾಹುವಿನ ನೀರಾಟದ ವರ್ಣನೆ ವಿಮಲಸೂರಿಯಲ್ಲಿ ರಮ್ಯವಾಗಿ ಬಂದಿದೆ; ನಾಗಚಂದ್ರ ಅದನ್ನು ಬಿಟ್ಟಿದ್ದಾನೆ.

ಮೂಲದ ಕೆಲವು ಅನೌಚಿತ್ಯಗಳು ನಾಗಚಂದ್ರನಲ್ಲಿ ಪರಿಹೃತವಾಗಿವೆ: ಉದಾಹರಣೆಗೆ, ಮಂಡೋದರಿಯ ಸವತಿಮಾತ್ಸರ್ಯವನ್ನು ತೋರಿಸುವ ಒಂದು ಸನ್ನಿವೇಶ. ಹಾಗೆಯೆ ಮೂಲದಲ್ಲಿಲ್ಲದ ಎಷ್ಟೋ ಚೆಲುವುಗಳು ಅವನಲ್ಲಿ ಹೊಸದಾಗಿ ಸೇರಿವೆ: ಉದಾಹರಣೆಗೆ, ಉತ್ಪಲನೇತ್ರೆಯ ವಿವಾಹ ಸಂದರ್ಭ.

ನಾಗಚಂದ್ರ ವಿಮಲಸೂರಿಯನ್ನು ಕಣ್ಣು ಮುಚ್ಚಿಕೊಂಡು ಅನುಸರಿಸಿಲ್ಲ. ಕಥಾಸರಣಿಯಲ್ಲಿ, ಪಾತ್ರದ ವಿವರಗಳಲ್ಲಿ ಅವನು ಹಲಕೆಲವು ಮಾರ್ಪಾಟುಗಳನ್ನು ಮಾಡಿಕೊಂಡಿರುವುದುಂಟು. ಇವುಗಳಲ್ಲಿ ಕೆಲವು ಅನಪೇಕ್ಷಣೀಯವೆನಿಸಿವೆ. ರಾವಣನ ಪಾತ್ರ ದಲ್ಲಿ ವಿಮಲಸೂರಿಗೂ ನಾಗಚಂದ್ರನಿಗೂ ಅಂತರ ಎದ್ದು ಕಾಣುತ್ತದೆ. ವಿಮಲಸೂರಿಯ ರಾವಣ ಅತ್ಯಂತ ಉದಾತ್ತ ವ್ಯಕ್ತಿ ; ನಮ್ಮ ಗೌರವ ಸಹಾನುಭೂತಿಗಳಿಗೆ ಪಾತ್ರನಾಗುವ ಸುಸಂಸ್ಕೃತ. ಆದರೆ ನಾಗಚಂದ್ರನಲ್ಲಿ ರಾವಣನ ಈ ಉದಾತ್ತತೆ, ಸುಸಂಸ್ಕೃತ ನಡೆವಳಿಕೆ ಅಷ್ಟಾಗಿ ಪರಿಪೋಷಗೊಂಡಿಲ್ಲ; ಅದಕ್ಕೆ ಕೆಲವೆಡೆ ಅಪೋಹವುಂಟಾಗಿದೆ. ಅವನು ಕೆಲವೆಡೆ ರಾವಣನ ಪಾತ್ರಕ್ಕೆ ಮೆರುಗು ಕೊಟ್ಟಿದ್ದಾನೆ ; ಉದಾಹರಣೆಗೆ, "ಅಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ" ಎಂಬ ರಾವಣಪರವಾದ ಮಾತು ಅದ್ಭುತವಾಗಿದೆ. ಆದರೆ ಅದಕ್ಕೆ ತಕ್ಕಂತೆ ಉದ್ದಕ್ಕೂ ರಾವಣನ ಪಾತ್ರವನ್ನು ನಿರ್ವಹಿಸಿಲ್ಲ ಕವಿ. ಇದರಿಂದಾಗಿ, "ಇವನ ಚಿತ್ರ ಮೂಲಕೃತಿಯನ್ನು ಬಲುಮಟ್ಟಿಗೆ ಹೋಲುತ್ತದೆ. ಆದರೆ ಅದರಲ್ಲಿ ಮೂಲದಲ್ಲಿರುವಷ್ಟು ಸೌಂದರ್ಯವಿಲ್ಲ, ಗಾಂಭೀರ್ಯವಿಲ್ಲ, ದುರಂತತೆಯ ಬೃಹತ್ಪ್ರಮಾಣ ವಿಲ್ಲ. ತುಪ್ಪದ ಹನಿ ಅಲ್ಲಲ್ಲಿ ಹತ್ತಿದ ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದಂತೆ ಆ ಚಿತ್ರವಿದೆ" ಎಂಬ ವಿಮರ್ಶೆಗೆ ಎಡೆಯಾಗಿದೆ. ಆದರೆ ಈ ಅಭಿಪ್ರಾಯವನ್ನು ಒಪ್ಪದವರೂ ಉಂಟು.

ವಿಮಲಸೂರಿಯಲ್ಲಿ ರಾವಣನ ಮತ್ತು ಅವನ ಪೂರ್ವಜರ ವೃತ್ತಾಂತ ಕಾವ್ಯಾರಂಭದಲ್ಲೇ ಬರುತ್ತದೆ. ನಾಗಚಂದ್ರನಾದರೆ ಅದನ್ನು ಕಾವ್ಯದ ನಡುವೆ ತಂದು, ರಾಮ ಕಥೆಯಿಂದ ಕಾವ್ಯ ವನ್ನು ಆರಂಭಿಸಿದ್ದಾನೆ. "ರಾವಣನ ಪಾತ್ರದ ದೃಷ್ಟಿಯಿಂದ

ನೋಡಿದರೆ ಇದು ಅಷ್ಟು ತೃಪ್ತಿಕರವಾಗಿಲ್ಲವೆಂದು ತೋರುತ್ತದೆ". ನಾಗಚಂದ್ರನ ಮಾರ್ಪಡೆಯನ್ನು ಸಮರ್ಥಿಸುವುದೂ ಸಾಧ್ಯ.

ರಾವಣ ಪರಾಂಗನಾವಿರತಿವ್ರತವನ್ನು ಸ್ವೀಕರಿಸಿದ ಸನ್ನಿವೇಶ ವಿಮಲಸೂರಿಯಲ್ಲಿ ಸವಿಸ್ತರವಾಗಿ ಬಂದಿದೆ. ನಾಗಚಂದ್ರ ಅದನ್ನು ನೇರವಾಗಿ ಚಿತ್ರಿಸದೆ, ಅದನ್ನು ರಾವಣನೊವ್ಮೆ ಸ್ಮರಿಸಿಕೊಂಡಂತೆ ಹೇಳಿದ್ದಾನೆ. ಇದು ಹೀಗೆ ಪರೋಕ್ಷವಾಗಿ ಬಂದಿರುವುದರಿಂದ, ಅದರ ಸತ್ಪರಿಣಾಮ ಹಾಗೂ ರಾವಣನ ವ್ಯಕ್ತಿತ್ವದ ಘನತೆ ಅಷ್ಟಾಗಿ ಅರಿವಾಗುವುದಿಲ್ಲ. ವಿಮಲಸೂರಿಯ ರಾವಣ ರಾಮನೊಡನೆ ಸಂಧಿ ಮಾಡಿಕೊಳ್ಳಲು ಒಪ್ಪುತ್ತಾನೆ. ಅಲ್ಲಿ ಅವನ ಮನಸ್ಸಿನ ತುಮುಲ ಸಂಘರ್ಷಣೆಗಳು ಹೊರಪಡು ತ್ತವೆ. ನಾಗಚಂದ್ರನ ರಾವಣ ಸಂಧಿಗೊಪ್ಪುವುದಿಲ್ಲ.

ಒಟ್ಟನಲ್ಲಿ ನಾಗಚಂದ್ರನ ಪ್ರತಿಭೆ ಬಹುಮಟ್ಟಿಗೆ ಮೂಲಾನು ಸಾರಿಯಾದುದು. ಅವನ ಕಾವ್ಯ ಅನನ್ಯಪರತಂತ್ರವಾದ ಸೃಷ್ಟಿಯಲ್ಲ. ವಿಮಲ ಸೂರಿಗಿಂತ ಅವನು ಮೂಲಭೂತವಾಗಿ ಬೇರೆ ಎಂದು ತೋರಿಸುವಂತಹ "ಉತ್ಕೃಷ್ಟ ಕಲೆಯಿಂದ ತುಂಬಿದ ಮಾರ್ಪಾಟುಗಳಾವುವೂ ಅವನ ಕಾವ್ಯದಲ್ಲಿ ಕಂಡು ಬರುವುದಿಲ್ಲ". ಆದರೂ ಅವನಲ್ಲಿ ಅಪೂರ್ವತೆ ಸಾಕಷ್ಟು ಉಂಟು.

ಮೂರು ಸಂದರ್ಭಗಳು: ನಾಗಚಂದ್ರನ ಪ್ರತಿಭೆಯ ಪರಾ ಕಾಷ್ಠೆಯನ್ನು ತೋರುವ, ಈ ಕಾವ್ಯದ ಜೀವಸ್ಥಾನಗಳೆನ್ನ ಬಹುದಾದ ಮೂರು ಸನ್ನಿವೇಶಗಳನ್ನು ತುಸು ವಿವರವಾಗಿ ಸಮೀಕ್ಷಿಸಬಹುದು. ಉಪರಂಭೆಯ ಅಭಿಸಾರ, ಸೀತಾಪಹರಣ, ರಾವಣನ ಮನಃಪರಿವರ್ತನೆ—ಇವುಗಳಿಗೆ ಸಂಬಂಧಿಸಿವೆ ಈ ಮೂರು ಸಂದರ್ಭಗಳು. ಭಾವಾವಿಷ್ಕರಣ, ರಸೋತ್ಪಾದನ,

ಪಾತ್ರ ನಿರ್ಮಿತಿ, ಹೃದಯ ವಿಶ್ಲೇಷಣೆ ಇತ್ಯಾದಿಗಳಲ್ಲಿ ನಾಗಚಂದ್ರನ ಸಾಮರ್ಥ್ಯವೇನೆಂಬುದನ್ನು ಇವು ಚೆನ್ನಾಗಿ ಪ್ರಕಟಿಸುತ್ತವೆ.

(೧) ರಾವಣ ತನ್ನ ದಿಗ್ವಿಜಯಕಾಲದಲ್ಲಿ ನಳಕೂಬರನೆಂಬ ದಿಕ್ಪಾಲಕನ ನಗರವಾದ ದುರ್ಲಂಘ್ಯಪುರವನ್ನು ಮುತ್ತುತ್ತಾನೆ. ಆದರೆ ಆ ಪುರ ಅಭೇದ್ಯವಾದುದು. ಅದನ್ನು ವಶಪಡಿಸಿಕೊಳ್ಳು ವುದೆಂತೆಂಬ ಯೋಚನೆಗೀಡಾಗುತ್ತಾನೆ ದಶಕಂಠ.

ಅತ್ತ ನಳಕೂಬರನ ಹೆಂಡತಿ ಉಪರಂಭೆ, ''ರಾವಣಂಗೆ ಪಲಕಾಲಂ ಮುನ್ನೆಳಸಿರ್ಪ ಕಾಮುಕಾತರೆ'' ತನ್ನ ಮನೋರಥ ಕೈಸಾರಿತೆಂದು ಹರ್ಷಿತೆಯಾಗುತ್ತಾಳೆ. ರಾವಣನನ್ನು ತಾನು ಒಲಿದಿರುವುದಾಗಿಯೂ ತನ್ನ ಅಭೀಷ್ಟವನ್ನು ಸಲ್ಲಿಸಬೇಕೆಂದೂ ತನ್ನ ದೂತಿ ಚಿತ್ರಮಾಲೆಯ ಮೂಲಕ ಹೇಳಿಕಳುಹಿಸುತ್ತಾಳೆ; ಬರೀ ಹೇಳುವುದಲ್ಲ, 'ನಿಜಾಭಿಪ್ರಾಯಮಂ ಕಲಿಸಿ' ಕಳುಹು ತ್ತಾಳೆ. ಆ ಚಿತ್ರಮಾಲೆ ರಾವಣನ ಬಳಿಗೈದಿ ತಿಳಿಸುತ್ತಾಳೆ :

> ಉಪರಂಭೆಯೆಂಬಳೆಮ್ಮರ
> ಸಿ ಪೋಲಿಪೊಡೆ ರಂಭೆಗಗ್ಗಳಂ ಚೆಲ್ವಿಂದಾ
> ರುಪಮೆಗೆ ಪೆಱರೆನಿಪಳ್ ಪೀ
> ನ ಪಯೋಧರೆ ನಿನ್ನ ಸಾರ್ಕೆಗಟ್ಟಿದಳೆನ್ನಂ
>
> ಪಲವು ದಿನ ನಿನ್ನೊಳ್ ತೊ
> ಟ್ಟೊಲವಿಂದಾ ಚೆನ್ನೆ ನಿನ್ನನನವರತಂ ಪಂ
> ಬಲಿಸುತ್ತುಂ ಚಿತ್ತೋದ್ಭವ
> ನಲರಂಬುಗಳುರ್ಚೆ ನಾಡೆ ಪಾಡೞಿದಿರ್ದಳ್
>
> ಏವೊಗಳ್ವೆನತನುವಿದ್ಯಾ
> ದೇವತೆ ನಿರತಿಶಯಮೆನಿಪ ರೂಪಿಂ ವಿದ್ಯಾ
> ದೇವತೆ ಸಾಮರ್ಥ್ಯದಿನೆನಿ
> ಪಾ ವಧು ಬರೆ ದೇವ ನಿನಗೆ ತೀರದುದುಂಟೇ

ಉಪರಂಭೆ ಅಸಾಧಾರಣ ಸೌಂದರ್ಯವತಿ; ಅಷ್ಟೇ ಅಲ್ಲ, ವಿದ್ಯಾಪಾರಂಗತೆ. "ಆ ವಧು ಬರೆ ದೇವ ನಿನಗೆ ತೀರದುದುಂಟೆ?" ಎಂಬ ದೂತಿಯ ನುಡಿ ಅರ್ಥಗರ್ಭಿತವಾಗಿದೆ. ಉಪರಂಭೆ ರಾವಣನ ಪ್ರಣಯಭಿಕ್ಷೆ ಯಾಚಿಸುತ್ತಿದ್ದಾಳೆ; ಅವನೂ ಸಮ್ಮತಿಸಿದರೆ, ಅವನಿಗೆ ದೊರಕದುದು ಯಾವುದು? ಅತಿಶಯವಾದ ಭೋಗವೇನೊ ಸಿಗುತ್ತದೆ; ಜೊತೆಗೆ ದುರ್ಲಂಘ್ಯಪುರವನ್ನು ಸ್ವಾಧೀನಪಡಿಸಿಕೊಳ್ಳಲು ಬೇಕಾದ ವಿದ್ಯೆಯೂ ಕರಗತವಾಗುತ್ತದೆ.

ಆದರೆ ರಾವಣ ಇದನ್ನು ಕೇಳಿ ಹಿಗ್ಗುವುದಿಲ್ಲ. ಅಂಥ ಪಾಪವನ್ನವನು ಆಚರಿಸಲಾರ. "ಪೞಿಯುಂ ಪಾಪಮುಮಪ್ಪ ದುಶ್ಚರಿತ್ರಮನೇವೆನ್" ಎಂದು ಚಿಂತಿಸಿ, ವಿಭೀಷಣನೊಡನೆ ಆಲೋಚಿಸುತ್ತಾನೆ. ಉಪರಂಭೆಯನ್ನು ಬರಿಸಿ, ಹುಸಿದು ನಂಬಿಸಿ, ಪ್ರತಿವಿದ್ಯೆಯನ್ನು ಕಲಿತುಕೊಳ್ಳುವುದು ಯುಕ್ತವೆಂದು ವಿಭೀಷಣನ ಸಲಹೆ. ಅದರಂತೆ ರಾವಣ "ನಿನ್ನ ನುಡಿಗೊಡಂಬಟ್ಟೆನ್, ಆಕೆಯಂ ತಾಯೆಂದು" ವಕ್ರೋಕ್ತಿಯನ್ನಾಡುತ್ತಾನೆ ದೂತಿಗೆ. ಪರಸತಿಯಾದ ಉಪರಂಭೆಯನ್ನವನು ತಾಯಿಯಂತೆ ಭಾವಿಸುತ್ತಾನೆ; ದುರಾಲೋಚನೆಗೆ ಅವನ ಚಿತ್ತದಲ್ಲಿ ಆಸ್ಪದವಿಲ್ಲ. ಆದರೆ ರಾಜನೀತಿಯನ್ನನುಸರಿಸಿ ಅವಳನ್ನು ಕರೆಸುತ್ತಾನೆ.

ಬಳಿಕ ಉಪರಂಭೆ ಬರುತ್ತಾಳೆ. ಅವಳಿಗೆ ಹುಸಿ ಪ್ರೀತಿಯನ್ನು ತೋರಿ, "ನಿನಗಂ ಎನಗಂ ದುರ್ಲಂಘ್ಯಪುರದೊಳ್ ಕೂಟಮಪ್ಪಂತು ಮಾಡು" ಎನ್ನುತ್ತಾನೆ ರಾವಣ. ಆಕೆ ಸಾಲವಿದ್ಯಾಭೇದಿನಿಯೆಂಬ ಪ್ರತಿವಿದ್ಯೆಯನ್ನು ರಾವಣನಿಗೆ ಹೇಳಿ ಕೊಡುತ್ತಾಳೆ: "ಎನ್ನರುಮಂ ಮಱಗಿಡಿವುದು ಚೋದ್ಯಮಲ್ತು

ಮದನೋನ್ಮಾದಂ !''. ಆ ವಿದ್ಯೆಯನ್ನು ಕೈಗೊಂಡು ಅವಳನ್ನು ಕಳುಹಿ, ಮರುದಿವಸ ಪುರವನ್ನು ವಶಮಾಡಿಕೊಂಡು ನಳಕೂಬರನನ್ನು ಸೆರೆಹಿಡಿಯುತ್ತಾನೆ. ಅನಂತರ ರಹಸ್ಯವಾಗಿ ಉಪರಂಭೆಯನ್ನು ಬರಿಸಿ, "ನೀಂ ವಿಶುದ್ಧ ಕುಲದ ಕುಶಧ್ವಜಂಗಂ ಮಧುಕಾಂತೆಗಂ ಪುಟ್ಟಿದುದಱಿಂ, ನಿಜ ಕುಲಾಚಾರಮಂ ಬಗೆದು ಶೀಲಪರಿಪಾಲನಂ ಮಾಳ್ಪುದು. ಅಂತಲ್ಲದೆಯುಂ, ನೀನೆನಗೆ ವಿದ್ಯೋಪದೇಶಂಗೆಯ್ದುದಱಿಂ ಗುರು ವಾ ದೆ. ಪೆಱತೇನುಮಂ ಬಗೆಯದೆ ನಳಕೂಬರನೊಳ್ ಕೂಡಿ ಸುಖಮಿರು'' ಎಂದು ಉಪದೇಶಿಸಿ, ಅವಳ ಮನಸ್ಸಿನ ಕಿಲ್ಬಿಷವನ್ನು ನಿವಾರಿಸುತ್ತಾನೆ. ನಳಕೂಬರನನ್ನು ಬಿಡುಗಡೆ ಮಾಡಿ ಮನ್ನಿಸುತ್ತಾನೆ.

ರಾವಣನ ಶೌಚಗುಣ, ರಾಜನೀತಿಜ್ಞತೆ ಎರಡೂ ಈ ಪ್ರಸಂಗದಲ್ಲಿ ಪರಿಣಾಮಕಾರಿಯಾಗಿ ಅಭಿವ್ಯಕ್ತವಾಗುತ್ತವೆ.

(೨) ಚಂದ್ರನಖಿಯ ಮಗನಾದ ಶಂಭುಕನ ವಧೆಯ ಸುದ್ದಿಯಿಂದ ರೋಷಾವಿಷ್ಟನಾದ ರಾವಣ ದಂಡಕಾರಣ್ಯಕ್ಕೆ ಪುಷ್ಪಕ ವಿಮಾನದಲ್ಲಿ ಹೊರಡುತ್ತಾನೆ :

ಪ್ರತಿಕೂಲಾನಿಲನಿಂ ಪತಾಕೆ ಮುಗುಳೆಂಬಂತಾಗೆ ಕೈಸನ್ನೆಯಿಂ
ಶ್ರುತಿಯಂ ಸಾರ್ತರೆ ಪೋಪುದಲ್ತು ನಯಮೆಂಬಂತಾಗಿ ಘಂಟಾರಣ
ತ್ಕೃತಿ ಸಾರ್ತಂದುದು ಪುಣ್ಯದೇವತೆಯ ಕಣ್ಣೀರೆಂಬಿನಂ ಮೇಘಸಂ
ಹತಿಯಿಂದಲ್ಲುಗೆ ಮುತ್ತು ಪುಷ್ಪಕವಿಮಾನಂ ದಂಡಕಾರಣ್ಯಮಂ

ಅಲ್ಲಿ ಬಂದು ನೋಡುತ್ತಾನೆ; "ಒಂದು ತಣ್ಬುೞಿಲ ತಾಣದೊಳ್ ಬಱಸಿಡಿಲ ಬೞಿವಿಡಿದು ಪೊಳೆವ ಕುಡುಮಿಂಚಿನಂತೆ ಬಲಭದ್ರನ

ಕೆಲದೊಳಿರ್ದ" ಸೀತೆ ಕಣ್ಣಿಗೆ ಬೀಳುತ್ತಾಳೆ. ಇದ್ದಕ್ಕಿದ್ದಂತೆ ಅವನ ಮನ ಚಂಚಲಿಸುತ್ತದೆ:

ಬಲೆ ದೃಷ್ಟಿಗೆ ವಜ್ರದ ಸಂ
ಕಲೆ ಹೃದಯಕ್ಕೆನಿಪ ರೂಪವತಿ ಜಾನಕಿ ಕ
ಣ್ಬೊಲದೊಳಿರೆ ಪದ್ಮಪತ್ರದ
ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ

ತಳತಳಿಸಿ ಪೊಳೆಯೆ ಸೀತೆಯ
ಚಳನಯನಂ ಖಚರಚಕ್ರವರ್ತಿಯ ಚಿತ್ತಂ
ಕೊಳದೊಳಗೆಳವಾಳೆ ತೆಱಂ
ಬೊಳೆವಂತೆ ಕಲಂಕಿ ಕದಡಿದತ್ತಾಕ್ಷಣದೊಳ್

ಸೀತೆಯನ್ನು ನೋಡನೋಡುತ್ತ ಅವನ ಚಿತ್ತದಲ್ಲಿ ಮೋಹ ಉಕ್ಕೇರುತ್ತದೆ. ಅವಳ ಲಾವಣ್ಯವಾದರೂ ಎಂಥದು!—

ಹಾರಮರೀಚಿ ಮಂಜರಿ ಸುಧಾರಸಧಾರೆ ಸುಧಾಂಶುಲೇಖೆ ಕ
ರ್ಪೂರಶಲಾಕೆ ನೇತ್ರಸುಖದಾಯಕಮೀದೊರೆತಲ್ಲವೀಕೆ ಶೃಂ
ಗಾರ ಸಮುದ್ರಮಂ ಕಡೆಯೆ ಪೃದ್ಭವನುದ್ಭವೆಯಾದಳೆಂದು ಕ
ಣ್ಣಾರೆ ದಶಾಸ್ಯನೀಕ್ಷಿಸಿದನೀಕ್ಷಿಸಿ ಕಣ್ಣಿಱದಾರೆ ಮನ್ಮಥಂ

ಇದುತನಕ ಸತ್ಯಶೌಚಸಂಪನ್ನನಾಗಿದ್ದ ದಶಾನನ "ಕಿಡಿ ಮಸಿಯಾದವೋಲ್" ಈಗ ಕಳಂಕಿತನಾಗುತ್ತಾನೆ. "ಅನ್ಯಾಂಗನಾಸ್ಪೃಹೆಯಿಂ ತಾಳ್ದಿದನಲ್ತೆ ಕಾಲವಶದಿಂ, ವಿಸ್ಮಯಾವಹಮಲ್ತು, ಅಬ್ಧಿಯುಂ ಒರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ?" ಎಂಬ ಕವಿಯ ಉದ್ಗಾರ ಧ್ವನಿರಮ್ಯವಾಗಿದೆ. ಸಮುದ್ರ ಎಂದೂ ಮೇರೆದಪ್ಪುವುದಿಲ್ಲ; ಒಂದು ವೇಳೆ ಕಾಲವಶದಿಂದ ತಪ್ಪಿದರೆ ಎಷ್ಟೊಂದು ಅನರ್ಥ! ರಾವಣ ಕಡಲಿನಂತೆ ಇದುವರೆಗೆ ಮರ್ಯಾದೆಮೀರದ ಮಹಾನುಭಾವನಾಗಿದ್ದ; ಈಗ

ದುರ್ದೈವವಶಾತ್ ಅವನ ಸಂಯಮದ ಕಟ್ಟು ಕಳಚಿದೆ. ಇದರಿಂದ ಎಷ್ಟೊಂದು ಜನಕ್ಕೆ–ಅವನೂ ಸೇರಿ – ವಿಪತ್ತು, ವಿನಾಶ, ದುಃಖ ! ಹಿಂದಿನ ಘನತೆ, ಮುಂದಿನ ದುರಂತ ಎರಡೂ ಧ್ವನಿತವಾಗುತ್ತವೆ, ಈ ಅರ್ಥಾಂತರನ್ಯಾಸದಲ್ಲಿ.

ರಾವಣ ತನ್ನ ಅವಲೋಕಿನೀವಿದ್ಯೆಯನ್ನು ಸ್ಮರಿಸಿ ಬರಿಸುತ್ತಾನೆ; ಇವರು ಯಾರೆಂದು ವಿಚಾರಿಸುತ್ತಾನೆ. ವಿದ್ಯೆ ತಿಳಿಸುತ್ತದೆ. "ಈಕೆಯುನ್ ಈತನಿಂದ ಅಗಲ್ಚುವ ಉಪಾಯ ಮಾವುದು ?'' ಎಂದು ಕೇಳುತ್ತಾನೆ ರಾವಣ. ಆ ವಿದ್ಯಾದೇವತೆ ಭಯಚಕಿತಚಿತ್ತೆಯಾಗಿ ಹೇಳುತ್ತದೆ :

ಕಾವ ಬೆಸಂ ನಿನ್ನದು ಸಕ
ಲಾವನಿಯುನಧರ್ಮನಿರತರಂ ನಿಯಮಿಸಿ ನೀ
ನೀ ವಿಷಯಕ್ಕೆಱಗುವುದುಂ
ಕಾವರೆ ಕಣೆಗೊಂಡರೆಂಬ ನುಡಿಗೆಡೆಯಕ್ಕುಂ

ಅನ್ನೆಯದಿಂ ನಡೆವವರಂ
ನೀ ನ್ನಿಯಮಿಸುವೈ ದಶಾಸ್ಯ ಪೆಜಿನಾವಂ ನಿ
ನ್ನನ್ನಿಯಮಿಸುವಂ ಮುನ್ನೀರ್
ಬೆನ್ನೀರಿನೆ ಬೆರಸಲಣ್ಣ ತಣ್ಣೀರೊಳವೆ

ಧರ್ಮರಕ್ಷಕನೆ ಧರ್ಮಹಂತಕನಾದರೆ ಗತಿಯೇನು ? ಕಾಯುವವನೆ ಕೊಲ್ಲಹೊರಡುವುದೆ ? "ಮುನ್ನೀರ್ ಬೆನ್ನೀರಿನೆ ಬೆರಸಲಣ್ಣ ತಣ್ಣೀರೊಳವೆ ?" ಹಂಡೆಯ ನೀರು ಬಿಸಿಯಾದರೆ ತಣ್ಣೀರು ಬೆರಸಬಹುದು ; ಕೊಳ ಕೆರೆ ಹೊಳೆಗಳ ನೀರು ಕಾದರೂ ಹೇಗೊ ತಣ್ಣಗೆ ಮಾಡಬಹುದು. ಆದರೆ ಸಾಗರವೆ ಕಾದು ತಕಪಕ ಕುದಿಯತೊಡಗಿದರೆ ಅದಕ್ಕೆ ತಣ್ಣೀರನ್ನು ಎಲ್ಲಿಂದ ತರೋಣ ? ಸಾಮಾನ್ಯರು ದಾರಿತಪ್ಪಿದರೆ ಅವರನು

ನಿಯಂತ್ರಿಸಬಹುದು ; ಸಕಲರನ್ನೂ ನಿಯಂತ್ರಿಸುವ ಚಕ್ರವರ್ತಿಯೇ ನಿಯಂತ್ರಣಗೆಟ್ಟರೆ ಏನು ಗತಿ? ಅಪೂರ್ವ ಶಕ್ತಿಯುಳ್ಳ ರೂಪಕವಿದು.

ಆದರೆ ರಾವಣನಿಗೆ ವಿದ್ಯೆಯ ಬೋಧೆ ನಾಟುವುದಿಲ್ಲ. 'ನಾನೊಂದು ಕೇಳಿದರೆ ನೀನೊಂದು ಹೇಳುತ್ತೀಯಲ್ಲ' ಎನ್ನುತ್ತಾನೆ. ಆಗ ವಿದ್ಯೆ ಕನಲಿ, ಲಕ್ಷ್ಮಣ ಯುದ್ಧರಂಗ ದಲ್ಲಿರುವುದಾಗಿಯೂ ರಿಪುಬಲ ಅಧಿಕವಾಗಿದ್ದರೆ ತಾನು ಸಿಂಹನಾದ ಮಾಡಿದಾಗ ಬರಬೇಕೆಂದು ರಾಮನಿಗೆ ಹೇಳಿ ಹೋಗಿರುವುದಾಗಿಯೂ ತಿಳಿಸುತ್ತದೆ. ಆಗ ರಾವಣ 'ಲಕ್ಷ್ಮಣನಿಗೆ ಕೇಳದಂತೆ ವೈಕುರ್ವಣ ಶಕ್ತಿಯಿಂದ ಸಿಂಹನಾದ ಮಾಡು' ಎಂದು ವಿದ್ಯೆಗೆ ಆದೇಶಿಸುತ್ತಾನೆ. ಅದರಂತೆ ವಿದ್ಯೆ ಮಾಡುತ್ತದೆ. ಆ ದನಿಯನ್ನು ಕೇಳಿ ರಾಮ ಸೀತೆಗೆ ಜಟಾಯುವನ್ನು ಕಾವಲಿಟ್ಟು ಹೋಗುತ್ತಾನೆ. ಇತ್ತ

ಅಟಿಪಿ ಪರವಧುಗಧೋಗತಿ
ಗಿಟಿವುದನಭಿನಯಿಸುವಂತೆ ಸೀತೆಯ ಸಾರ
ಙ್ಗಟಿದಂ ನಭದಿಂ ಖಚರಂ
ಪಟೀಗಂ ಪಾಪಕ್ಕಮಂಜದವರೇಗೆಯ್ಯರ್

ಇದೊಂದು ಪ್ರತೀಕವೆ ಆಗಿದೆ. ಇದುವರೆಗೆ ಖಚರನಾಗಿ ಎತ್ತರದಲ್ಲಿದ್ದ ರಾವಣ ವಿಷಯ ವ್ಯಾಮೋಹದಿಂದ ಕೆಳಗಿಳಿಯು ತ್ತಾನೆ, ಬೀಳುತ್ತಾನೆ; ಸೀತೆಯನ್ನು ಹಿಡಿಯುತ್ತಾನೆ. ಹೇಗೆ?

ದೋಷಿ ಪಿಡಿವಂತೆ ದಿವ್ಯದ
ಕಾಸಿದ ಕುಟುವಂ ಕಡಂಗಿ ಕಾರ್ಕೋತಗನಂ
ಕೂಸು ಪಿಡಿವಂತೆ ಪಿಡಿದಂ
ಸಾಹಿಗನವಿವೇಕಿ ಸೀತೆಯಂ ದಶಕಂಠಂ

ಅವಳನ್ನು ವಿಮಾನದಲ್ಲಿಟ್ಟು "ಶಶಿಕಲೆಯಂ ಸೈಂಹಿಕೇಯ ನುಯ್ವಂತೆ ಉಯ್ದಂ". ಮುಂದೆ ರಾವಣ ಸೀತೆಯನ್ನು ತಾಯಂತೆ ಭಾವಿಸುವುದರ ಸೂಚನೆಯಿದೆ, "ಕಾಳೋರಗನಂ ಕೂಸು ಪಿಡಿವಂತೆ" ಎಂಬ ಉಪಮೆಯಲ್ಲಿ.

ಈಗ ಸೀತೆಯ ಅವಸ್ಥೆಯನ್ನು ನೋಡಬೇಕು. ಅದನ್ನು ಕವಿ ಕರುಣಪೂರ್ಣವಾಗಿ ಚಿತ್ರಿಸುತ್ತಾನೆ ಈ ಪದ್ಯಗಳಲ್ಲಿ :

ಸಿಂಗದ ಕೈಗೆ ಬಿಟ್ಟ ಹರಿಣಾಂಗನೆವೋಲೆರ್ದೆಗೆಟ್ಟು ರಾಮಚಂ
ದ್ರಾಂಗನೆ ನೀಳ್ದ ಕಣ್ಮಲರ್ಗಳಿಂದುಗೆ ಕಣ್ಬನಿಗಳ್ ಮಡಲ್ತ ಪ
ಕ್ಷ್ಮಂಗಳನೊತ್ತಿ ಕಾರ ಮುಗಿಲಿಂದುಗುತರ್ಪ ನವೋದಬಿಂದುಜಾ
ಲಂಗಳೆನಲ್ ಜೆಮರ್ತಳೆನಸುಂ ತನುವಲ್ಲಿ ಮುಗುಳ್ತುದೆಂಬಿನಂ

ಮನವೆಳದಾಗೆ ಮುನ್ನ ಮಿಗೆ ತಳ್ತೆಮೆಯಿಂ ಕರೆಗಣ್ಮಿ ಸೂಸೆ ಕ
ಣ್ಬನಿ ಗಳಕಂದಳಂ ಬಿಗಿಯೆ ಗದ್ಗದ ನಿಸ್ವನಮುಣ್ಮೆ ಹಾರವಂ
ಜನಿಯಿಸೆ ಸೀತೆ ಭೀತೆ ದೆಸೆಗೆಟ್ಟೆರ್ದೆಗೆಟ್ಟಳಿ ಪೊಣ್ಮಿದತ್ತ ಮಾ
ರ್ದನಿ ದೆಸೆಯೊಳ್ ದಿಗಂಗನೆಯರುಂ ಬಿಡದಂದೊಡನಟ್ಟಿ
ಮಾಟ್ಕೆಯಿಂ

ಭೋಂಕನೆ ಕಂಡು ಸೀತೆ ದಶಕಂಧರನಂ ನೆಲೆವೆರ್ಚೆ ಶೋಕವಾ
ತಂಕವೊಡರ್ಚೆ ಪುಷ್ಪಕವಿಮಾನದ ರತ್ನವಿಚಿತ್ರ ಪುತ್ರಿಕಾ
ಸಂಕುಲಮಟ್ಟಿತ್ತೊಡಟ್ಟುವು ಬೆಮರ್ತೊಡೆ ಕೂಡೆ ಜೆಮರ್ತುವಾಗಳಾ
ಲಂಕೆಯ ಸೂಡನುನ್ನತಿಯ ಕೇಡನವಂಗೆ ನಿವೇದಿಪಂತೆವೋಲ್

ಬಲೆಗೊಳಗಾದ ಸೋಗೆ ನವಿಲಂತೆ ಭಯಾಕುಳೆ ತನ್ನ ಚಿತ್ತದೊಳ್
ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯದರ್ಶನ
ಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸು ಮುಚ್ಚಿವೋಗಿ ತ
ಣ್ಣೆಲರಲೆಪಿಂದೆ ಮೂರ್ಛೆದಿಳಿದಳ್ ಮುಗುಳ್ದುಂ ಪೊಱಪೊಣ್ಮೆ
ಹಾರವಂ

ಕ್ರೂರಾತ್ಮಂ ವಂಚಕನವಿ
ಚಾರಿ ದುರಾಚಾರಿ ಬಗೆಯಂದುಯ್ದಪನೆನ್ನಂ
ಹಾ ರಾಮಾ ಹಾ ರಾಮಾ
ಬಾರಿಪರಾರೆಂದು ಸೀತೆ ಶೋಕಂಗೆಯ್ದಳ್

ಸೀತೆಯು ಅತ್ಯುತ್ಕಟ ಪತಿಪ್ರೇಮ, ಪರಪುರುಷನ ಕೈಗೆ ಸಿಕ್ಕಿದೆನೆಂದು ಅವಳಿಗಾದ ದುಃಖ ಇಲ್ಲಿ ಹೃತ್ಸ್ಪರ್ಶಿಯಾಗಿ ವ್ಯಕ್ತವಾಗುತ್ತದೆ. ಸೀತೆಯು ಬಾಹ್ಯಾಂತಃಚಕ್ಷುಗಳಲ್ಲಿ ತುಂಬಿ ನಿಂತಿರುವುದು ರಾಮನ ಮೂರ್ತಿ; ಆ ಸ್ಥಾನವನ್ನು ಮತ್ತಾರಿಗೂ ಅವಳು ಕೊಡಲಾರಳು. ಆದರೆ ಅವಳ ಹೊರಗಣ್ಣಿನ ಮುಂದೆ ಈಗ ಅನಿವಾರ್ಯವಾಗಿ ರಾವಣನಿದ್ದಾನೆ. ಆದರೇನಾಯಿತು? ಬಗೆಗಣ್ಣಿನ ಮುಂದೆ ರಾಮನಿಲ್ಲವೆ? ಅವನನ್ನು ಮಾತ್ರವೆ ನೋಡಬೇಕು ಎಂಬ ಸಂಕಲ್ಪದಿಂದ ಅವಳು ಕಣ್ಣು ಮುಚ್ಚಿಕೊಳ್ಳುತ್ತಾಳೆ.

ಇತ್ತ, ಮನೋವಲ್ಲಭೆಯನ್ನು ಕಾಣದ ರಾಮನ ಅಳಲು ದಾರುಣವಾಗುತ್ತದೆ. ಅವನು ವೈದೇಹಿಯನ್ನರಸಿಕೊಂಡು ವನಾಂತರದಲ್ಲೆಲ್ಲ ತೊಳಲುತ್ತಾನೆ; ಹುಚ್ಚನಂತೆ ಪ್ರಲಾಪಿಸುತ್ತಾನೆ :

ಕಳಹಂಸಾಲಸಯಾನೆಯಂ ಮೃಗಮದಾಮೋದಾಸ್ಯನಿಶ್ವಾಸೆಯಂ
ತಳಿರೇ ತಾವರೆಯೇ ಮದಾಳಿಕುಲಮೇ ಕರ್ಣೆಯ್ದಲೇ ಮತ್ತಕೋ
ಕಿಳಮೇ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕುಂ
ತಳೆಯಂ ಕೈರವನೇತ್ರೆಯಂ ಪಿಕರವಪ್ರಖ್ಯಾತೆಯಂ ಸೀತೆಯಂ

ಮಲಯಜಗಂಧಬಂಧುರ ಸರೋರುಹವಂ ದರಹಾಸ ಚಂದ್ರಿಕಾ
ವಿಲಸಿತ ಚಂದ್ರಮಂಡಲಮನಾ ರಮಣೀರಮಣೀಯ

ಲೋಚನೋ

ತ್ಪಲ ಸಹಜಪ್ರಸನ್ನ ಕಮಲಾಕರಮಂ ಸ್ಮರರಾಜ ರಾಜ್ಯಮಂ
ಗಲ ಮಣಿದರ್ಪಣೋಪಮಮನೋಪಳ ವಕ್ತ್ರಮನೆಲ್ಲಿ
ಕಾಣ್ಬೆನೋ

ಕಳರುತಿ ಮತ್ತಕೋಕಿಲಮನೀಕ್ಷಣಮುತ್ಪಲಮಂ ವಿನೀಲಕಂ
ತಳಮಳಿಮಾಲೆಯಂ ಕಚಭರಂ ನವಿಲಂ ನಡೆ ಹಂಸೆಯಂ ತಳಂ
ತಳಿರ್ಗಳನಾನನಂ ಕಮಲಮಂ ನಳಿತೋಳ್ ಲತೆಯಂ ಲತಾಂತ
ಕೋ
ಮಳೆ ಮಱಿಗೊಂಡು ಮಯ್ಗರೆದು ಕಾಡುವ ಕಾರಣಮೇನೊ
ಜಾನಕೀ

ಕರುಣಮಿಶ್ರಿತವಾದ ವಿಪ್ರಲಂಭಶೃಂಗಾರದ ಭಾರವನ್ನು ಸಮುಚಿತವಾದ ಮಂದಗತಿಯ ಛಂದೋವಿನ್ಯಾಸದಲ್ಲಿ ನಿರೂಪಿಸುವ ಈ ಭಾಗ ಒಂದು ಅತ್ಯಂತ ಸುಂದರ ಕಾವ್ಯಖಂಡ ವಾಗಿದೆ, ಭಾವಗೀತೆಯಾಗಿದೆ. 'ಸೀತೆಯನ್ನು ಕಂಡಿರಾ?' ಎಂದು ರಾಮ ತಳಿರು, ತಾವರೆ, ಮದಾಳಿಕುಲ, ಕನ್ನೈದಿಲೆ, ಮತ್ತಕೋಕಿಲಗಳನ್ನು ವಿಚಾರಿಸುತ್ತಾನೆ. ಏಕೆಂದರೆ, ಅವುಗಳ ಗುಣ ಅವಳಲ್ಲಿದೆ: ಅವಳು ಪಲ್ಲವಾಧರೆ, ಕಮಲಮುಖಿ, ಭೃಂಗಕುಂತಳೆ, ಕೈರವನೇತ್ರೆ, ಪಿಕವಾಣಿ. ಆದ್ದರಿಂದ ಅವುಗಳಿಗೆ ಅವಳ ನೆಲೆ ಗೊತ್ತಿರಲೆಬೇಕು. ಅವಳು ತನ್ನ ಪಿಕರವದಿಂದ ಪ್ರಖ್ಯಾತೆಯೆ ಆಗಿದ್ದಾಳೆ; ಅವಳ ವಿಷಯ ಆ ನಿಸರ್ಗಕ್ಕೆ ತಿಳಿಯದೆ? ರಾಮನ ಉನ್ಮಾದದಲ್ಲೂ ಅರ್ಥವಿದೆ, ಔಚಿತ್ಯವಿದೆ.

ಸೀತೆಯ ಅವಯವಗಳೆಲ್ಲ ಪ್ರಕೃತಿಯಿಂದಲೆ ಆದವು. ಈಗ ಅವೆಲ್ಲ ಬೇರೆ ಬೇರೆಯಾಗಿ ತಮ್ಮ ತಮ್ಮ ಮೂಲದಲ್ಲಿ ಐಕ್ಯವಾಗಿ, ಅವುಗಳ ಸಮಷ್ಟಿರೂಪವಾದ ಸೀತೆ ಮರೆಯಾಗಿದ್ದಾಳೆ. ಅವೆಲ್ಲ ಉಂಟು, ಅವಳು ಮಾತ್ರ ಇಲ್ಲ. ಇದೇನು ಸೋಜಿಗ, ಇದಕ್ಕೇನು ಕಾರಣ ಎಂದು ಶೋಕಿಸುತ್ತಾನೆ ರಾಮ. ಇಲ್ಲಿ

ಬರುವ ಸ್ತ್ರೀಸೌಂದರ್ಯದ ಚಿತ್ರ ಸಾಂಪ್ರದಾಯಿಕವೆ ಆದರೂ, ನಾಗಚಂದ್ರನ ಕೈಯಲ್ಲಿ ಅದಕ್ಕೆ ನೂತನತೆ ಬಂದಿದೆ.

(೩) ಬಹುರೂಪಿಣೀ ವಿದ್ಯೆ ತನಗೆ ಪ್ರತ್ಯಕ್ಷವಾದ ಮೇಲೆ, ರಾವಣ ಜಾನಕೀಮುಖಾವಲೋಕನ ಕಾತರನಾಗಿ ''ಅಲರಂಬುಗಳಿಲ್ಲದ ಕಾಮನೆಂಬಿನಂ'' ಪ್ರಮದವನಕ್ಕೆ ಬರುತ್ತಾನೆ. ರಾವಣನ ಗಂಡಗಾಡಿಯನ್ನು ಕೆಲದಲ್ಲಿದ್ದ ಖಚರ ಕಾಂತೆಯರು ಸೀತೆಗೆ ತೋರಿಸುತ್ತಾರೆ. ಆದರೆ

ರಾವಣನ ರೂಪು ಸೀತಾ
ದೇವಿಗೆ ತೃಣಕಲ್ಪಮಾಯ್ತು ಪತಿಭಕ್ತಿಯೊಳಾ
ರೀ ವನಿತೆಯ ತೆಱದಿಂ ಸ
ದ್ಭಾವಮನೊಳಕೊಂಡ ಪುಣ್ಯವತಿಯರ್ ಸತಿಯರ್

ಏನಂ ಕೇಳ್ದಪೆನೋ ರಘು
ಸೂನುವ ಲಕ್ಷ್ಮಣನ ಪೊಲ್ಲವಾರ್ತೆಯನೆನ್ನಿಂ
ದಾ ನಳಿನಾನನೆ ಬರ್ಪ ದ
ಶಾನನನಂ ಕಂಡು ತಾಳ್ದಿದಳ್ ತಲ್ಲಳಮಂ

ಹಾಗೆ ತಲ್ಲಣಿಸುತ್ತಿದ್ದ ಸೀತೆಯ ಬಳಿಗೆ ಬಂದು ರಾವಣ ''ಬಹುರೂಪಿಣೀವಿದ್ಯೆ ಸಾಧಿತವಾದುದು, ಇನ್ನೆನಗಸಾಧ್ಯ ಮಪ್ಪ ಮರುವಕ್ಕವಿಲ್ಲ, ನಿನ್ನ ನಚ್ಚಿನ ರಾಮನ ದೆಸೆಯಂ ಬಿಟ್ಟು ಎನಗೊಡಂಬಟ್ಟು ಸಾಮ್ರಾಜ್ಯ ಸುಖಮನನುಭವಿಸು'' ಎನ್ನುತ್ತಾನೆ. ಆಗ ಸೀತೆ ವಿಹ್ವಲೆಯಾಗಿ,

ಕರುಣಿಸುವೊಡೆನಗೆ ದಶಕಂ
ಧರ ಧುರದೊಳ್ ರಘುತನೂಜನಾಯುಃಪ್ರಾಣಂ
ಬರೆಗಂ ಬಾರದಿರೆನುತುಂ
ಧರಿತ್ರಿಯೊಳ್ ಮೆಯ್ಯನೊಕ್ಕು ಮೂರ್ಛೆಗೆ ಸಂದಳ್

ರಾಮ ಬದುಕಿರುವತನಕ ತನ್ನ ಬಳಿಗೆ ಬರದಿರುವಂತೆ ಬೇಡಿ ಕೊಳ್ಳುತ್ತಾಳೆ, ಸೀತೆ. ರಾಮ ರಣದಲ್ಲಿ ಗೆದ್ದೆ ಗೆಲ್ಲುತ್ತಾನೆಂದು ಅವಳ ಭರವಸೆ; ಒಂದು ಪಕ್ಷ ಗೆಲ್ಲದೆ ಮಡಿದರೆ ತಾನು ಅಸುದೊರೆಯುವುದು ಇದ್ದೇ ಇದೆ. ರಾಮನ ಜಯಾಪಜಯ ನಿಶ್ಚಯವಾಗುವವರೆಗೆ ರಾವಣ ತನ್ನ ಬಳಿ ಸುಳಿಯದಿದ್ದರೆ ಸಾಕು ಎನ್ನುವುದು ಸೀತೆಯ ಹಾರೈಕೆ.

ಈ ಮಾತುಗಳನ್ನು ಕೇಳಿದ ರಾವಣನ ಮನದಲ್ಲಿ ಒಯ್ಯನೆ ಅನುಕಂಪೆ ಮೂಡುತ್ತದೆ :

ಕದಡಿದ ಸಲಿಲಂ ತಿಳಿವಂ
ದದೆ ತನ್ನಿಂ ತಾನೆ ತಿಳಿದ ದಶವದನಂಗಾ
ದುದು ವೈರಾಗ್ಯಂ ಸೀತೆಯೊ
ಳುದಾತ್ತನೊಳ್ ಪುಟ್ಟದಲ್ತೆ ನೀಲೀರಾಗಂ

ನೀರು ಒಮ್ಮೆ ಕದಡಿ ರಾಡಿಯಾದರೆ, ಅದನ್ನು ಯಾರೂ ತಿಳಿಮಾಡುವುದು ಸಾಧ್ಯವಿಲ್ಲ; ಕಾಲಕ್ರಮದಲ್ಲಿ ಅದೇ ತಿಳಿಯಾಗಬೇಕು. ರಾವಣನ ಚಿತ್ತ ಸರಸಿಯೂ ಹಾಗಾಯಿತು. ಅವನ ಕಾರುಣ್ಯರಸವೆ ಸೀತೆಯೊಳಾದ ಮೋಹವನ್ನು ತೊಳೆಯುತ್ತದೆ. ಅವನು ಸೀತೆಯನ್ನು ಪ್ರಶಂಸಿಸುತ್ತಾನೆ; ತನ್ನನ್ನು ನಿಂದಿಸಿಕೊಳ್ಳುತ್ತಾನೆ :

ಗುಣಪರಿಪಾಲನಾರ್ಥಮೆನಗಂ ಬಗೆದೋರಿದಳಿಲ್ಲ ದಿವ್ಯಭೂ
ಷಣ ವಸನಾಂಗರಾಗಮುಮನೊಲ್ಲದೆ ಖೇಚರರಾಜ್ಯಲಕ್ಷ್ಮಿಯಂ
ತೃಣಸಮನಾಗೆ ಭಾವಿಸಿದಳೀ ಸತಿಯುಂ ಮೊದಲಾದ ಪೌರುಷ
ಪ್ರಣಯಿಯೆನಿಂತಪೇಕ್ಷಿಸುವೆನೇ ಗುಣಹಾನಿಯನೆನ್ನ ಪಾಪದಿಂ

ಇವರಂ ಪ್ರಾಣಪ್ರಿಯರಂ
ನೆವಮಿಲ್ಲದೆ ಕರ್ಮವಶಮೆ ನೆವಮೆನೆ ಕಂದ

ರ್ಣವಿಮೋಹದಿಂದಗಲ್ಚಿದೆ
ನವಿವೇಕಿಯೆನೆನ್ನ ಕುಲದ ಪೆಂಪಟಿಪಿನೆಗಂ

ರಾಮನಿನಗಲ್ಚಿ ತಂದಾ
ನೀ ಮಾನಿನಿಗಿನಿತು ದುಃಖಮಂ ಪುಟ್ಟಿಸಿದೆಂ
ಕಾಮವ್ಯಾಮೋಹದಿನಾ
ಶಾಮುಖಮಂ ಪುದಿಯೆ ದುರ್ಯಶಃಪಟಹರವಂ

ಕಡೆಗೆ, ಪೌರುಷೋಚಿತವಾದ ರೀತಿಯಲ್ಲಿ ಸೀತೆಯನ್ನು ರಾಮನಿಗೊಪ್ಪಿಸಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದಾಗಿ ತನಗೆ ತಾನೆ ಉದ್ವೇಗಪರನಾಗಿ ಹೇಳಿಕೊಳ್ಳುತ್ತಾನೆ:

ಇರದುಯಿದ್ದೀಗಳೆ ಕೊಟ್ಟೊಡೆನ್ನ ಕಡುಪುಂ ಕಟ್ಟಾಯಮುಂ ಬೀರಮುಂ
ಬಿರುದುಂ ಬೀಸರಮಕ್ಕುಮೋಸರಿಸಿದಂತಾಗಿರ್ಕುಮಂತಾಗದಂ
ತಿರೆ ದೋರ್ಗರ್ವಮನಿರ್ವಲಂ ಪೊಗಟ್ವಿನಂ ಸೌಮಿತ್ರಿಯುಂ ರಾಮನಂ
ವಿರಥರ್ಮಾಡಿ ರಣಾಗ್ರದೊಳ್ ಪಿಡಿದು ತಂದಾಂ ಕೊಟ್ಟಪೆಂ ಸೀತೆಯಂ

ಇದು ಬಿದ್ದ ರಾವಣ ಎದ್ದು ನಿಂತ ಪರಿ; ಇನ್ನು ಶುಭಪರವಾದದ್ದು ಮುಂದಿನ ದಾರಿ.

ಈ ಸಂದರ್ಭಗಳನ್ನು ನೋಡಿದರೆ, "ನಾಗಚಂದ್ರನು ಎಷ್ಟೇ ಪರಾನುಕರಣ ಮಾಡಿರಲಿ, ಅವನಲ್ಲಿ ಇಂಥ ಸನ್ನಿವೇಶಗಳಲ್ಲಿ ಸ್ವೋಪಜ್ಞತೆ ಸಾಕಷ್ಟು ಕಂಡುಬರುತ್ತದೆ. ಆದ್ದರಿಂದ ಅವನು ವೇಷ ಹಾಕಿಕೊಂಡು ಆಟ ಕಟ್ಟಿ ಕುಣಿಯುವ ಕವಿಯಲ್ಲ. ನಿಜವಾಗಿಯೂ 'ಸರಸ್ವತಿ ಕುಡಲ್ ವರಮಂ ಪಡೆದ' ಕವಿ" ಎಂದು ನಿರ್ಧರಿಸುವಂತಾಗುತ್ತದೆ.

# ೬. ನಾಗಚಂದ್ರನ ಶೈಲಿ

ಚಂಪೂಕವಿಗಳಲ್ಲಿ ತನ್ನದೇ ಆದ ಒಂದು ವಿಶಿಷ್ಟ ಶೈಲಿಯನ್ನು ಪಡೆದುಕೊಂಡಿದ್ದಾನೆ ನಾಗಚಂದ್ರ. ಸರಳತೆ, ಮೃದುತ್ವ, ಮಾಧುರ್ಯ, ಗೇಯತೆ–ಈ ಗುಣಗಳಲ್ಲಿ ಅವನ ಶೈಲಿಯ ಜೀವಾಳ ಇದೆ. ನಮ್ಮ ಚಂಪೂಕಾವ್ಯಗಳ ಹುಟ್ಟುಸುಳಿಯಾದ ಕ್ಲಿಷ್ಟತೆಗೆ ಅವನಲ್ಲಿ ಪುರಸ್ಕಾರವಿಲ್ಲ. "ಸರಳಶೈಲಿಯ ಲೇಖಕರಲ್ಲಿ ಪ್ರಶಸ್ತಿಗಾಗಿ ಮೇಲಾಟವಾದಲ್ಲಿ ನಾಗಚಂದ್ರನೊಬ್ಬ ಗಣ್ಯ ಸ್ಪರ್ಧಾಳು." ಈ ಸರಳಶೈಲಿಗೆ ಕಾರಣಗಳೆರಡು : ಮೊದಲನೆಯದಾಗಿ, ಅವನ ಕಾಲದ ಯುಗಧರ್ಮದ ಪ್ರಭಾವ ಚಂಪುವಿನ ವಿದಗ್ಧತೆಯನ್ನು ಹಿಮ್ಮೆಟ್ಟಿಸಿ ಅದಕ್ಕೆ ಸರಳತೆಯ ದೀಕ್ಷೆ ತೊಡಿಸಿತ್ತು ; ಎರಡನೆಯದಾಗಿ, ಅವನ ಶೈಲಿಯ ಮೂಲ ಅವನ ಶೀಲದಲ್ಲೆ ಇದೆ.

ನಾಗಚಂದ್ರನ ವ್ಯಕ್ತಿತ್ವದ ಪ್ರಧಾನ ಲಕ್ಷಣಗಳೆಂದರೆ ಶಾಂತಿ, ಸಮಾಧಾನ, ಸೌಜನ್ಯ*. ಅವನಲ್ಲಿ ಪಂಪರನ್ನರ ಕ್ಷಾತ್ರಪ್ರವೃತ್ತಿ

---

* ಅವನ ಕಾವ್ಯದಲ್ಲಿ ಅನ್ಯಮತವಿಡಂಬನೆ–ಅದಕ್ಕೆ ಅವನ ಕಾಲದಲ್ಲಿ ಬಹಳ ಅವಕಾಶವಿತ್ತು–ತಲೆಹಾಕುವುದಿಲ್ಲ; ಒಂದೆರಡು ಕಡೆ ಅದು ಬಂದಿದ್ದರೂ ಸರಸವಾಗಿ, ನಯವಾಗಿ, ಸೂಚ್ಯವಾಗಿ ಬಂದಿದೆಯೆ ವಿನಾ ಎಲ್ಲೂ ಒರಟಾಗಿಲ್ಲ. ವೈದಿಕ ದೇವಿಯರನ್ನು ಅವನು ಸ್ವಾರಸ್ಯಪೂರ್ಣವಾಗಿ, ಔಚಿತ್ಯದ ಎಲ್ಲೆ ಮೀರದಂತೆ ಗೇಲಿಮಾಡಿರುವ ಈ ಪದ್ಯ ಗಮನಾರ್ಹವಾಗಿದೆ:

ಗಂಡನನೊರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟರೆಂದೊಡಾ
ಪೆಂಡಿರ ರೂಪುಮಂ ಸೊಬಗುಮಂ ಭವಮಂ ಪೆಸರ್ಗೊಳ್ವುದೇ
ಮನಂ
ಗೊಂಡಳನಂಗನಂ ರತಿಯೆನಲಾ ಚದುರೆತ್ತಣದಾಕೆಗೆಂದು ಕ
ಣ್ಗೊಂಡ ವಿಲಾಸದಿಂ ನಗುವುದಲ್ಲಿಯ ವಾರವಿಲಾಸಿನೀ ಜನಂ

ಯಿಲ್ಲ, ಆವೇಶವಿಲ್ಲ, ಮೊರೆತವಿಲ್ಲ. ಎಂತಲೇ ಮೃದುವಾದ, ಸ್ನಿಗ್ಧವಾದ, ಸೌಮ್ಯವಾದ ಭಾವಗಳ ಅಭಿವ್ಯಕ್ತಿಗೆ ಅವನ ಶೈಲಿ ನೂರಕ್ಕೆ ನೂರರಷ್ಟು ಅನುಕೂಲವಾಗಿರುವಂತೆ ಕಟೂಗ್ರ ಭಾವಗಳ, ವೀರರೌದ್ರಭಯಾನಕರಸಗಳ ಆವಿಷ್ಕಾರಕ್ಕೆ ಅಷ್ಟಾಗಿ ಸಮರ್ಥವಾಗಿಲ್ಲ. "ಸಮಾಹಿತ ಚಿತ್ತದ ನಾಗಚಂದ್ರನಲ್ಲಿ ರಾಗಗಭೀರತೆಯನ್ನು ಅಪೇಕ್ಷಿಸುವುದೂ ಒಂದೆ, ನಗರಾರಾಮ ದಲ್ಲಿ ಹೆಬ್ಬುಲಿಗಾಗಿ ಹುಡುಕಾಡುವುದೂ ಒಂದೆ."

ನಾಗಚಂದ್ರ ತನ್ನ ಶೈಲಿಯನ್ನು ಕುರಿತು ತಾನೆ ಸೂತ್ರಪ್ರಾಯ ವಾಗಿ ಪ್ರಸ್ತಾಪಿಸಿದ್ದಾನೆ :

ಪದರಚನೆ ಸಜ್ಜನಶ್ರವ
ಣದೊಳಂಚೆಯ ತುಪ್ಪುಳಿಂಚೆಯಂ ತೀವಿದವೋಲ್
ಮೃದುವೆನೆ ಹೊಸ ಬಗೆ ರಸಭಾ
ವದೊಳೋಕುಳಿಯಾಡುವಂತೆ ಪೇಳ್ದನಭಿನವಪಂಪಂ

ಈ ಮೃದುಲಲಿತ ಪದರಚನೆಯಿಂದ ಅವನ ಶೈಲಿಗೆ 'ವಿಪಂಚಿ ಯೀಂಚರ'ದ ಮೋಹಕತೆ ದೊರೆಕೊಂಡಿದೆ. ಓಜಸ್ಸಿಗಿಂತ ಮಾಧುರ್ಯ ಪ್ರಸಾದಗಳೆ ಅವನ ಶೈಲಿಯ ವರಿಷ್ಠ ಲಕ್ಷಣಗಳು ; ದ್ರಾಕ್ಷಾಪಾಕವೆ ಅದರ ಪರಮಸಿದ್ಧಿ. ಅವನೊಂದು ಕಡೆ ವೀಣಾ ಗಾನವನ್ನು ವರ್ಣಿಸುವಲ್ಲಿ, ಅವನ ಶೈಲಿಯ ಲಕ್ಷಣ ಲಕ್ಷ್ಯ ಗಳೆರಡೂ ಮೇಳವಿಸಿವೆ :

ಜಿತಭೃಂಗೀಝಂಕೃತಂ ನಿರ್ಜಿತ ಮದನ ಧನುರ್ಜ್ಯಾಲತಾ
ಟಂಕೃತಂ ತ
ರ್ಜಿತ ವೀಣಾ ಶಿಂಜಿತ ಭಂಜಿತ ರತಿರಮಣೀರತ್ನಕಾಂಚೀ
ಪ್ರಣಾದಂ

ಶ್ರುತಿಯಂ ತಟಿಸ್ಕೆ ರೋಮೋದ್ಗತಿಯೊಡನೆ ಗತಿಸ್ತಂಭಮಂ
ಖೇಚರಾಧೀ
ಶತನೂಜಂಗಿತ್ತುದಾ ಕನ್ನಿಕೆಯ ಮಧುರ ಸಪ್ತ ಸ್ವರೋತ್ಥಾನ
ಗಾನಂ

ನಾಗಚಂದ್ರ ಸ್ವಭಾವತಃ ಅಚ್ಚಗನ್ನಡದ ಆರಾಧಕ, ಆದರೆ ಸಂಸ್ಕೃತದ ಹದವಾದ ಬಳಕೆಯನ್ನು ವರ್ಜಿಸಿದವನಲ್ಲ. "ದೇಸಿ ಮಾರ್ಗಮೆಂಬೆರಡಱೊಳಂ" ತಾನು ಕೃತಿ ರಚಿಸಿರುವುದಾಗಿ ಅವನು ಹೇಳಿಕೊಂಡಿದ್ದಾನೆ. ಕನ್ನಡ-ಸಂಸ್ಕೃತಗಳ ಸಾಮರಸ್ಯವೆ ಅವನ ಶೈಲಿಯ ರಹಸ್ಯ. ಅವನು ಮನಸ್ಸು ಮಾಡಿದರೆ ಸಂಸ್ಕೃತ ಭೂಯಿಷ್ಠವಾಗಿ ಬರೆಯಬಲ್ಲ; ಇದೋ ಒಂದು ನಿದರ್ಶನ:

ಗಣಿಕಾರತ್ಯಂತ ಸುಪ್ತಿಸ್ಖಲನ ಚತುರನಂಭೋಜಕಿಂಜಲ್ಕ
ಸಂಚಾ
ರಣಶೀಲಂ ಪುಷ್ಪವಲ್ಲೀ ನಟನಪಟು ನಟಂ ಸಂಚರಚ್ಚಂಚರೀಕ
ಕ್ವಣನಜ್ಯಾಸಂಗ ಚಿತ್ತೋದ್ಭವ ಭುವನಜಯೋತ್ಪಾದನ ಪ್ರೌಢ
ಸೇನಾ
ಗ್ರಣಿ ಚೇತಃಪ್ರೀತಿಯಂ ಪೆರ್ಚಿಸುವುದುಪವನಸ್ವೈರಚಾರಂ
ಸಮೀರಂ

ಆದರೆ ಅವನು ಸಂಸ್ಕೃತಸಾಂದ್ರವಾಗಿ ಬರೆಯುವಾಗಲೂ ಮಾರ್ದವಕ್ಕೆ, ಶ್ರುತಿಸುಭಗತೆಗೆ ಭಂಗವೊದಗುವುದಿಲ್ಲ. "ರೋದೋ ಭಾಗದೊಳ್ ಘೂರ್ಣಿಸಿದುದಭಿನವಾಂಭೋದ ಗಂಭೀರನಾದಂ'' ಎನ್ನುವಲ್ಲಿ ಶೈಲಿ ಸಂಸ್ಕೃತಪೂರ್ಣವಾಗಿಯೂ ಕಿವಿಗೆ ಹಿತವಾಗಿದೆ; ಗುಡುಗಿನ ಅನುಭವವನ್ನು ತಂದುಕೊಡು ವಂತಿದೆ.

ನಾಗಚಂದ್ರನಲ್ಲಿ ದೇಸಿಯ ವಿಲಾಸ ವಕ್ರತೆ ಬಿಂಕ ಬಿನ್ನಾಣ ಗತ್ತುಗಳಿಗೆ ಅಷ್ಟಾಗಿ ಸ್ಥಾನವಿಲ್ಲ. ಅವನ ಶಿಷ್ಟಮನೋ

ಧರ್ಮವೂ ಇದಕ್ಕೆ ಕಾರಣವಿದ್ದೀತು. ಆದರೆ ಸರಳವಾದ ತಿರುಳ್ಗನ್ನಡದ ಮಾಧ್ಯವುವೆ ಅವನಿಗೆ ಅಚ್ಚುಮೆಚ್ಚು. ಅದರಲ್ಲಿ ಅವನು ಹೃದ್ಯವಾಗಿ, ಕಣ್ಣಿಗೆ ಕಟ್ಟುವಂತೆ ಚಿತ್ರಗಳನ್ನು ಕೊಡುತ್ತಾನೆ; ಒಂದು ನಿದರ್ಶನವನ್ನು ನೋಡಬಹುದು :

> **ಬಳಸಿ ಸುಟೀದಾಡಿ ಕಾಲ್ವಿಡಿ**
> **ದೆಳಸಿ ಕಳಾಳಾಪಮೊದವೆ ಜನನಿಯು ಮೊಲೆವಾ**
> **ಲ್ಗಳನುಣ್ಬ ಸಿಸುವಿನಂತಿರೆ**
> **ಕಳಮೆಯ ಪಾಲ್ದೆನೆಯ ಪಾಲನುಂಡವು ಗಿಳಿಗಳ್**

ಎಲ್ಲರಿಗೂ ತಿಳಿದಿರುವ, ಅರ್ಥೈಸುವ ಅಗತ್ಯವಿಲ್ಲದ ಬಿಡಿಬಿಡಿಯಾದ ನುಡಿಗಳು ; ಸೊಗಸಾದ ಉಪಮಾನ ; ಹಿತಮಿತವಾದ ಶಬ್ದಾಲಂಕಾರ: ಒಟ್ಟಿನಲ್ಲಿ ಒಳ್ಳೆಯ ಸ್ವಭಾವೋಕ್ತಿ ಚಿತ್ರ. ಇಂಥ ಪದ್ಯಗಳು ಚಂಪೂಕಾವ್ಯಗಳಲ್ಲಿ ಬಹಳವಾಗಿ ಸಿಕ್ಕುವುದಿಲ್ಲ.

ನಮ್ಮ ಬಹುಮಂದಿ ಚಂಪೂಕವಿಗಳಿಗಿರುವಂತೆ ಪ್ರಕಾಂಡ ಪಾಂಡಿತ್ಯದ ಮೆರವಣಿಗೆಯ ತಿಕ್ಕಲು ನಾಗಚಂದ್ರನಿಗಿಲ್ಲ. ಅವನು ಬಳಸುವುದು ಸರಳವಾದ, ಸಾರ್ವತ್ರಿಕವಾದ, ದುಷ್ಕರವಲ್ಲದ ಉಪಮೆ ರೂಪಕ ಮುಂತಾದ ಕೆಲವೇ ಅಲಂಕಾರಗಳನ್ನು. ಅರ್ಥಾಂತರನ್ಯಾಸಾಲಂಕಾರದಲ್ಲಿ ಅವನಿಗೆ ವಿಶೇಷವಾದ ಒಲವು, ಪರಿಶ್ರಮ. ಅರ್ಥಾಂತರನ್ಯಾಸಗಳು ನಾಗಚಂದ್ರನಲ್ಲಿರುವಷ್ಟು ಸಮೃದ್ಧವಾಗಿ ಮತ್ತಾವ ಕವಿಯಲ್ಲೂ ಇಲ್ಲ. ಇವುಗಳಲ್ಲಿ ಕೆಲವು ಮಾತ್ರ ಧ್ವನಿಯುಕ್ತವಾಗಿದ್ದು ಸಾರ್ಥಕವಾಗಿವೆ; ಉಳಿದವು ಸಾಮಾನ್ಯವೆನಿಸುತ್ತವೆ. ಕೆಲವು ಅರ್ಥಾಂತರನ್ಯಾಸಗಳನ್ನಿಲ್ಲಿ ಪಟ್ಟಿ ಹಾಕಬಹುದು : ಪಗೆಯ ಪಗೆ ಕೆಳೆಯಲ್ತೇ, ಲಲಾಟದೊಳ್ ವಿಧಿಯ ಬರೆದ ಲಿಪಿ ಜಲಲಿಪಿಯೇ, ಸಿರಿ ನಿಂದ ಕಾಲೊಳೇಂ ನಿಂದಪಳೇ, ಅಬ್ಧಿಯುಮೊರ್ವೆ ಕಾಲವಶದಿಂ

ಮರ್ಯಾದೆಯುಂ ದಾಂಟದೇ, ಮುನ್ನೀರ್ ಬೆನ್ನೀರಿನೆ ಬೆರಸಲಣ್ಣ ತಣ್ಣೀರೊಳವೇ, ಹೃದಯಗ್ರಾಹಿಗಳಾಗಿ ಶುಕ್ತಿಕೆಗಳಿಂ ಮುಕ್ತಾ ಫಲಂ ಪುಟ್ಟವೇ, ಪೊನ್ನಾಗದೆ ಪೊರ್ದೆ ಪರುಷಮಂ ಲೋಹಂಗಳ್, ಆಶಾಶಕ್ತಿ ಸಾಮಾನ್ಯಮೇ, ಅಧಿಕಭಾರಮೆಱಗಿ ಸದಾರಂ, ವಯಃಪರಿಣತನಾದೊಡಂ ಬಿಸುಡಲಾರ್ಪನೆ ರಾಗಿ ನಿಸರ್ಗಭಾವಮಂ, ಅನುರಕ್ತೆ ಪ್ರಿಯನ ವಿರಹಮಂ ಸೈರಿಪಳೇ, ಅಪಕಾರಿಯ ಸಿರಿ ಖಳರನಲ್ಲದೇಂ ತಣಿಪುಗುಮೇ, ನ್ಯಾಯಾರ್ಜಿತಮಲ್ಲದೆನಿಪ ಧನಮೇ ಬಂಡಂ, ಆತ್ಮಸತ್ವಗುಣ ಹಾನಿಯೆ ಸೂಚಿಸದೇ ವಿನಾಶಮಂ, ಪೊಸತೆನಿಸಿದ ವಸ್ತು ಸೋಲಮಂ ಪುಟ್ಟಿಸದೇ, ವಿಷಯಾತುರರೇನ್ ಗಡ ಮುಂದುಗಾಣ್ಬರೇ, ಬಗೆವರೇ ವಿಷಯಾಸವಮತ್ತರೇನುಮಂ, ಪುರಾತನ ಕರ್ಮಾಯತ್ತಮಲ್ತೆ ದೇಹಿಗಳೆಸಕಂ, ಕರ್ಮವಿಪಾಕ ಮಾರ ಬಗೆಗಂ ವೈಕಲ್ಯಮಂ ತಾರದೇ, ಕಿಂಕರಭಾವದಿನ ಪ್ರಶಸ್ತಮಾವುದುಮುಂಟೇ, ಗಗನಮುನನುಲೇಪನಂಗೆಯ್ದೊಡೆ ಮಸಿ ಪತ್ತುಗುಮೇ, ಶುಚಿಯಿಲ್ಲದಂಗೆ ಬೆಸಕಯ್ಗುಮೆ ವಿದ್ಯೆಗಳಾವುವಾದೊಡಂ, ಧನಕ್ಕೆ ಮಾಣಿಕ್ಯದೀಪಮೇನೆಱಗುಗುಮೇ –ಇತ್ಯಾದಿ.

ಸೊಗಸಾದ ಉಪಮೆಗಳನ್ನು ಕೊಡುವುದರಲ್ಲೂ ನಾಗಚಂದ್ರ ಎತ್ತಿದಕೈ. ದಶರಥನನ್ನು ಮಾರಾಂತ ರಾಜರು ಕಡೆಗೆ "ಬೆಳ್ಳಿರಲೆಗೆ ಗಱಿ ಮೂಡಿದ ತೆಱದಿಂ" ಪಲಾಯನಮಾಡಿದ ರಂತೆ! ನಡಗಿಟ್ಟು ಮಱೆದ ಧನಮಂ ಬಡವಂ ನೆನೆವಂತೆ, ಸೆಯ್ದಿಲ ಕಾವಿನ ಪೊದೆಯುಂ ಪೊಯ್ದಂತೆ, ದೂಳಿಗೊಂಡ ಪುತ್ತಳಿಗೆಯಂತೆ, ಬಲೆಗೊಳಗಾದ ಸೋಗೆನವಿಲಂತೆ, ಪರಹ ಸ್ತದಿಂ ಕಾಳಾಹಿಯಂ ಮೊಟನಿಡಲ್ ಬರ್ಪಂತೆ, ಕದಡಿದ

ಸಲಿಲಂ ತಿಳಿವಂತೆ, ದಿನಲಕ್ಷ್ಮಿಯು ಬಳಸಿದ ದೀಪಮಾಲೆಯಂತೆ, ಸುಟಿರಿಯೊಳಗಣ ಪಣಿಗಳಂತೆ, ಬರ್ಕೆವಲಸು ಕಾಯ್ಪಂತೆ- ಮುಂತಾದ ಉಪಮಾನಗಳೆಲ್ಲ ಕವಿಪ್ರತಿಭೆಯ ವಿಸ್ಫುಲಿಂಗಗಳು.

## ೭. ಉಪಸಂಹಾರ

ಕನ್ನಡ ಸಾಹಿತ್ಯದಲ್ಲಿ ನಾಗಚಂದ್ರನ ಸ್ಥಾನವೇನು, ಅವನ ಕಾವ್ಯಗಳ ನೆಲೆಬೆಲೆಗಳೇನು ಎಂಬ ಪ್ರಶ್ನೆಗೆ ಉತ್ತರಿಸುವುದು ಕಷ್ಟವಾಗಲಾರದು. ಅವನ ಕಾವ್ಯಗಳ ಬಗೆಗೆ ವಿದ್ವಾಂಸರ ಅಭಿಪ್ರಾಯಗಳನ್ನು ನೋಡಬಹುದು:

"ಮಲ್ಲಿನಾಥಪುರಾಣದ ಗುಣವೆಲ್ಲವೂ ರಾಮಚಂದ್ರಚರಿತ ಪುರಾಣದಲ್ಲಿದೆ...ಮಲ್ಲಿನಾಥಪುರಾಣವು ಹತ್ತೆಂಟು ಎಸಳಿನ ಹೂವು ಅರಳಿದಂತೆ; ರಾಮಚಂದ್ರಚರಿತಪುರಾಣವು ಸಾವಿರ ಕಂಬದ ಬಸ್ತಿಯನ್ನು ಕಟ್ಟಿದಂತೆ".

"ಕನ್ನಡ ಕಾವ್ಯಗಳಲ್ಲಿ ಕಥಾಂಶವು ತೀರ ಸ್ವಲ್ಪವಾಗಿದ್ದು ಮಹಾಕಾವ್ಯದ ಮಟ್ಟಕ್ಕೆ ಹತ್ತಿರವಾಗಿ ಸುಳಿಯುವ ಪ್ರೌಢ ಸರಣಿಯನ್ನು ಕೆಲವು ಕೃತಿಗಳಲ್ಲಿ ಕಾಣುತ್ತೇವೆ. ಅಂಥ ಕೃತಿಗಳಲ್ಲಿ ಮಲ್ಲಿನಾಥಪುರಾಣವೂ ಒಂದು. ಇದರಲ್ಲಿ ಕವಿತೆಯ ಯೌವನ ವೈಭವವಿದೆ, ಪರಿಣತವಯದ ಪರಿಪಾಕವಿಲ್ಲ... ಮಹಾಕಾವ್ಯದ ಸತ್ವವುಳ್ಳ ಸತ್ಕಾವ್ಯವೆಂದು ಇದನ್ನು ಕರೆಯ ಬಹುದು".

"ಮಲ್ಲಿನಾಥಪುರಾಣಕ್ಕಿಂತ ಪಂಪರಾಮಾಯಣದಲ್ಲಿ ಮಹಾ ಕಾವ್ಯದ ಉನ್ನತಿ-ಉತ್ಕಟತೆಗಳು ಹೆಚ್ಚು ತೋರಿವೆ. ಆದರೂ

ಒಟ್ಟು ನೋಟದಲ್ಲಿ ಪಂಪರಾಮಾಯಣವು ಮಹಾಕವಿಯೋಗ್ಯತೆಯುಳ್ಳ ಕವಿಯ ಸತ್ಕಾವ್ಯವೆಂದು ನಮಗೆ ತೋರುತ್ತದೆ."

'ಮಲ್ಲಿನಾಥಪುರಾಣ' ಮಹಾಕಾವ್ಯವಲ್ಲದಿದ್ದರೂ ಕನ್ನಡ ಸಾಹಿತ್ಯದಲ್ಲಿ ಅದೊಂದು ವಿರಳ ವರ್ಗದ ಕೃತಿಯಾಗಿದೆ. ಜಾನ್ ಡ್ರಿಂಕ್‌ವಾಟರ್ ಎಂಬ ವಿಮರ್ಶಕ ಮಹಾಕಾವ್ಯದ ಲಕ್ಷಣ ಹೇಳುವಾಗ, ಅದು 'ಭಾವಗೀತೆಗಳ ಸರಣಿ' (Sequence of Lyrical Pieces) ಎನ್ನುತ್ತಾನೆ. ಅವನ ಅಭಿಪ್ರಾಯ ಸಮರ್ಪಕವಲ್ಲದಿದ್ದರೂ, ಅವನು ಹೇಳುವ ಲಕ್ಷಣಕ್ಕೆ ಅನುರೂಪವಾಗಿರುವ ಕೃತಿ ನಮ್ಮ 'ಮಲ್ಲಿನಾಥಪುರಾಣ'. ಕನ್ನಡದ ಭಾವಗೀತ ಪರಂಪರೆಯಲ್ಲಿ ನಾಗಚಂದ್ರನ ವರ್ಣನೆಗಳಿಗೊಂದು ಗಣನೀಯವಾದ ಸ್ಥಾನವಿದೆ. ('ಮಲ್ಲಿನಾಥ ಪುರಾಣ'ದ ಎಷ್ಟೋ ಪದ್ಯಗಳನ್ನು ಅವನು ಪಂಪರಾಮಾಯಣದಲ್ಲಿ ಉಪಯೋಗಿಸಿಕೊಂಡಿದ್ದಾನೆ; ಪಂಪರಾಮಾಯಣದಲ್ಲೂ ಭಾವಗೀತಾತ್ಮಕ ಭಾಗಗಳು ವಿಪುಲವಾಗಿವೆ. ಎಂತಲೇ 'ಮಲ್ಲಿನಾಥಪುರಾಣ'ದ ಗುಣವೆಲ್ಲವೂ ರಾಮಚಂದ್ರ ಚರಿತ ಪುರಾಣದಲ್ಲಿದೆ' ಎನ್ನಬೇಕಾಗುತ್ತದೆ). 'ಮಲ್ಲಿನಾಥಪುರಾಣ'ವೊಂದು ಸತ್ಕಾವ್ಯ, ನಿಜ; ಆದರೆ 'ಮಹಾಕಾವ್ಯದ ಸತ್ವವುಳ್ಳ ಸತ್ಕಾವ್ಯ' ಎನ್ನುವುದು ವಿಮರ್ಶೆಯ ಖಚಿತತೆಯಿಲ್ಲದ ಮಾತು.

ಇನ್ನು ಪಂಪರಾಮಾಯಣ. ಇದು 'ಸಾವಿರ ಕಂಬದ ಬಸ್ತಿ'; ಇದರ "ಪಾತ್ರಸೃಷ್ಟಿಯು ಮಲ್ಲಿನಾಥಪುರಾಣದಲ್ಲಿಲ್ಲ"; ಇದರಲ್ಲಿ "ಮಹಾಕಾವ್ಯದ ಉನ್ನತಿ ಉತ್ಕಟತೆಗಳು ಹೆಚ್ಚು ತೋರಿವೆ" –ಎಂಬ ಅಭಿಪ್ರಾಯಗಳೆಲ್ಲ ಮಾನ್ಯವಾಗಬಹುದಿತ್ತು, ಅದು ನಾಗಚಂದ್ರನ ಸ್ವತಂತ್ರ ಸೃಷ್ಟಿಯಾಗಿದ್ದ ಪಕ್ಷದಲ್ಲಿ ಆದರೆ ವಸ್ತುಸ್ಥಿತಿ ಹಾಗಿಲ್ಲ. ಪಂಪರಾಮಾಯಣದಲ್ಲಿ ಮಹಾಕಾವ್ಯದ

ಗುಣಗಳಿವೆ; ಆದರೆ ಅದರ ಯಶಸ್ಸು ಸಂಪೂರ್ಣವಾಗಿ ನಾಗಚಂದ್ರನಿಗೆ ಸಲ್ಲತಕ್ಕದ್ದಲ್ಲ; ಅವನಿಗೆ ಸಲ್ಲುವ ಪೂಜೆಯು ಬಹುಭಾಗ-ನಮಗೆ ಗೊತ್ತಿರಲಿ ಇಲ್ಲದಿರಲಿ-ವಿಮಲಸೂರಿಗೆ ಮತ್ತು ರವಿಷೇಣನಿಗೆ ಹೋಗುತ್ತದೆ.

ಪಂಪರಾಮಾಯಣವು "ಮಹಾಕವಿಯೋಗ್ಯತೆಯುಳ್ಳ ಕವಿಯ ಸತ್ಕಾವ್ಯವೆಂದು ನಮಗೆ ತೋರುತ್ತದೆ" ಎಂಬ ಮಾತಿನಲ್ಲಿ ವಿರೋಧಾಭಾಸವಿದೆ. ಅವನು ಮಹಾಕವಿ ಯೋಗ್ಯತೆ ಯುಳ್ಳವನಾಗಿದ್ದರೆ ಅವನದು ಮಹಾಕಾವ್ಯವಾಗಬೇಕಿತ್ತಲ್ಲವೆ? (ಅದು ಎಂಥ ಕಾವ್ಯವೆ ಆಗಿರಲಿ, ಆದರ ಪೂರ್ತಿ ಹೊಣೆ ಅವನದಲ್ಲ). ವಾಸ್ತವವಾಗಿ, ನಾಗಚಂದ್ರನದು 'ಮಹಾ ಕವಿಯೋಗ್ಯತೆ'ಯಲ್ಲ; ಅವನು ಆದಿಪಂಪನ 'ಅಸಾಧಾರಣ ಯೋಗ್ಯತೆ'ಯನ್ನು ಪಡೆದವನು ಎಂದು ಹೇಳುವುದು ಅತ್ಯುಕ್ತಿ ಯಾಗುತ್ತದೆ. ನಾಗಚಂದ್ರನದು ಪ್ರಧಾನವಾಗಿ ಭಾವಗೀತ ಪ್ರತಿಭೆಯೆ ಹೊರತು ಮಹಾಕಾವ್ಯಪ್ರತಿಭೆಯಲ್ಲ ಎಂದು ನಿರ್ಣಯಿಸಿದರೆ ತಪ್ಪಾಗಲಾರದು. "ಮಹಾಕಾವ್ಯದ ಮಟ್ಟದ ಹತ್ತಿರ ಸುಳಿಯುವ ಪ್ರೌಢ ಸರಣಿ" ಅವನಲ್ಲಿ ಕೆಲವೆಡೆ ಗೋಚರಿ ಸಿದರೂ, ಒಟ್ಟಿನಲ್ಲಿ ಅವನು ಪ್ರಥಮಶ್ರೇಣಿಯ ಮಹಾಕವಿಯಲ್ಲ; ದ್ವಿತೀಯ ವರ್ಗದ ಅಗ್ರಪೂಜ್ಯ ಕವಿಗಳಲ್ಲಿ ನಿಸ್ಸಂದೇಹವಾಗಿ ಅವನೊಬ್ಬ.

ನಾಗಚಂದ್ರ ತನ್ನನ್ನು ಅಭಿನವಪಂಪನೆಂದು ಕರೆದುಕೊಂಡ; ನಾವೂ ಹಾಗೆಯೆ ಕರೆಯುತ್ತೇವೆ. ಪಂಪನಿಗೂ ಅವನಿಗೂ ಇರುವ ಸಾಮ್ಯವಾದರೂ ಏನು? ಪಂಪ ಕನ್ನಡಕ್ಕೆ ಭಾರತ ವನ್ನು ತಂದುಕೊಟ್ಟಂತೆ ನಾಗಚಂದ್ರ ರಾಮಾಯಣವನ್ನು ತಂದುಕೊಟ್ಟ. ಈಗ ಉಪಲಬ್ಧವಿಲ್ಲದಿರುವ ಪೊನ್ನನ

'ಭುವನೈಕರಾಮಾಭ್ಯುದಯ' ಕನ್ನಡದಲ್ಲವತರಿಸಿದ ಪ್ರಪ್ರಥಮ ರಾಮಾಯಣವಾಗಿದ್ದಿರಬೇಕು. ಆದರೆ ನಾಗಚಂದ್ರ ಕನ್ನಡಿಗರಿಗೆ ಒದಗಿಸಿದುದು 'ಅಪೂರ್ವ'ವಾದ ರಾಮಕಥೆಯನ್ನು. ಅದು ಲೌಕಿಕ ರಾಮಾಯಣವಲ್ಲ, ಜೈನರಾಮಾಯಣ. ಅದನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟು ನಾಗಚಂದ್ರ ಮಹೋಪಕಾರವೆಸಗಿದ್ದಾನೆ. ಸದ್ಯಕ್ಕೆ ಅವನ ಜೈನ ರಾಮಾಯಣವೆ ಕನ್ನಡದ ಆದಿರಾಮಾಯಣವಾಗಿ ನಿಂತಿದೆ, ಪಂಪಭಾರತಕ್ಕೆ ಸಂವಾದಿಯಾಗಿ. ಆದರೆ ಪಂಪರಾಮಾಯಣ ಪಂಪಭಾರತದ ಸಮನಲ್ಲ; ಅಭಿನವಪಂಪ ಆದಿಪಂಪನಿಗೆ ಹೆಗಲೆಣೆಯಲ್ಲ. ಪಂಪನ ಶಕ್ತಿಯೋಗ್ಯತೆಗಳ ಕೆಲವಂಶಗಳು ನಾಗಚಂದ್ರನಲ್ಲುಂಟು; ಆದರೂ ಅವನ ಎತ್ತರ ಬಿತ್ತರಗಳು ಇವನಿಗೆಲ್ಲಿ ಬರಬೇಕು? ಅಂತೂ ನಾಗಚಂದ್ರ ಎಲ್ಲ ಅರ್ಥಗಳಲ್ಲಿ ಅಭಿನವಪಂಪನಲ್ಲ; ಆದರೆ ಅಭಿನಯ ಪಂಪನೂ ಅಲ್ಲ. ಅವನು ಸ್ವಂತ ತೇಜಸ್ಸು ವೈಶಿಷ್ಟ್ಯಗಳನ್ನುಳ್ಳ ವರಕವಿ, ಸತ್ಕವಿ. ಅವನನ್ನು ಪಂಪನೊಡನೆ ಸಮೀಕರಿಸುವುದು ಅಸಾಧ್ಯವೂ ಹೌದು, ಅನಗತ್ಯವೂ ಹೌದು. ಅವನ ಕೃತಿಗಳು ಪಂಪ ರನ್ನರಂತಹ ಹಿಂದಿನ ಕವಿಗಳಿಗೆ 'ಋಣಿ'ಯಾಗಿ, ಜನ್ನ ನೇಮಿಚಂದ್ರರಂತಹ ಮುಂದಿನ ಕವಿಗಳಿಗೆ 'ಗಣಿ'ಯಾಗಿ ನಿಂತಿವೆ.

ಸುಕೃತಿಪ್ರೀತಿಲತಾಸಮುತ್ಕಳಿಕೆ ವಿದ್ವನ್ಮಂಡಳೀರತ್ನಕಂ<br>
ಠಿಕೆ ಧರ್ಮಾಮೃತ ಮೇಘಮಾಳಿಕೆ ವಚಶ್ರೀನರ್ತಕೀನೃತ್ತವೇ<br>
ದಿಕೆ ಸಾಹಿತ್ಯಸರೋಜಕರ್ಣಿಕೆ ಯಶಶ್ರೀಕೇಕರಾಳೋಕಚಂ<br>
ದ್ರಿಕೆ ನಿಲ್ಕೀ [ನವಪಂಪಕಾವ್ಯಮನಿಶಂ] ಭದ್ರಂ ಶುಭಂ ಮಂಗಳಂ

# ಗ್ರಂಥ ಋಣ


೧. ಮಲ್ಲಿನಾಥಪುರಾಣ— ಕಾವ್ಯಕಲಾನಿಧಿಯ ಪ್ರಕಟನೆ

೨. ಪಂಪರಾಮಾಯಣ—ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟಣೆ

೩. 'ಪಂಪರಾಮಾಯಣ ಸಂಗ್ರಹ'ದ ಪೀಠಿಕೆ—ಡಿ. ಎಲ್. ನರಸಿಂಹಾಚಾರ್

೪. ಅಭಿನವಪಂಪ—ವಿವಿಧ ಲೇಖಕರು (ಕರ್ಣಾಟಕ ಸಂಘ, ಕರ್ಣಾಟಕ ಕಾಲೇಜು, ಧಾರವಾಡ)

೫. ಪಂಪರಾಮಾಯಣ ಕಾವ್ಯಪರಿಚಯ—ಡಿ. ವಿ. ಶೇಷಗಿರಿರಾವ್

೬. ಕನ್ನಡ ಸಾಹಿತ್ಯ ಚರಿತ್ರೆ—ರಂ. ಶ್ರೀ. ಮುಗಳಿ

೭. ಶೈಲಿ (ಭಾಗ-೧)—ಎಸ್. ವಿ. ರಂಗಣ್ಣ

೮. ಗುಣಭದ್ರರ ಉತ್ತರಪುರಾಣ—ಸಂ: ಎ. ಶಾಂತಿರಾಜ ಶಾಸ್ತ್ರಿ

೯. ನಾಗಚಂದ್ರ (ಒಂದು ಅಧ್ಯಯನ)—ವಿಜಯಾ ದಬ್ಬೆ

# ಅರ್ಥಸೂಚಿ

ಅಗ್ಗಳ-ಶ್ರೇಷ್ಠ
ಅಣ್ಮು-ಪರಾಕ್ರಮ ತೋರು
ಅತನು-ಮನ್ಮಥ
ಅನಾಮಯ-ಸ್ವಸ್ಥ, ನಿರುಪಾಧಿಕ
ಅನ್ನೆಯ-ಅನ್ಯಾಯ
ಅಪವರ್ಗ-ಮೋಕ್ಷ
ಅಲಸು-ಹೇಸು
ಅಲೆಪು-ಬೀಸುವಿಕೆ
ಅವಗಾಹ-ಮಜ್ಜನ
ಅವಲ್ಮಾಡು-ಕುಟ್ಟು
ಅಳಱಿಸು-ಹೆದರಿಸು
ಅಱ್ಕಮೆ-ಅಜೀರ್ಣ
ಅಱುಪು-ದುರಾಶೆಪಡು
ಅಱ್ತಿ-ಪ್ರೀತಿ, ಸಂತೋಷ
ಅಂಶು-ಕಿರಣ
ಅಟಂದು-ಮೇಲೆ ಬಿದ್ದು
ಆಭೋಗ-ವಿಸ್ತಾರ
ಆಮೋದ-ಸುವಾಸನೆ
ಆರ್-ಗರ್ಜಿಸು
ಆಸಾರ-ಮಳೆ
ಈಂಟು-ಕುಡಿ
ಉಗು-ಸುರಿ
ಉಣ್ಮು-ಹೊರಹೊಮ್ಮು
ಉಪಾದೇಯ-ಗ್ರಾಹ್ಯ
ಉರ್ಚು-ನಾಟು
ಕೈವಲ್ಯ-ಮೋಕ್ಷ

ಎರಲೆ-ಜಿಂಕೆ
ಎಳದಾಗು-ಚಂಚಲಿಸು, ನಡುಗು
ಎಳವಾಳೆ-ಎಳೆಯ ಬಾಳೆಮೀನು
ಒನಲಿ-ಜರಡಿ
ಒಳವೆ-ಉಂಟೆ
ಓಜೆ-ಶಕ್ತಿ; ಕ್ರಮ
ಕಚ-ತಲೆಗೂದಲು
ಕಟ್ಟಾಯ-ಅತಿ ಪರಾಕ್ರಮ
ಕಡಂಗು-ಉತ್ಸಾಹಿಸು
ಕಡುಪು-ಶೌರ್ಯ
ಕಣೆ-ಬಾಣ
ಕಬರಿ-ತುರುಬು
ಕಳವೆ-ಬತ್ತ
ಕಳಿವೂ-ಕಳಿತ ಹೂ
ಕಂಠಿಕೆ-ಹಾರ
ಕಂದಳ-ನೊಳಕೆ
ಕಾಯ್-ಕಾಯಿಬಿಡು
ಕಾಲಾಯಸ-ಕಬ್ಬಿಣ
ಕಾವಣ-ಚಪ್ಪರ
ಕಾಸಾರ-ಸರೋವರ
ಕಾಂತಾರ-ಕಾಡು
ಕುತ್ತ-ಪೀಡೆ
ಕುಱು-ಗುಳ
ಕೃತಾಂತ-ಯಮ
ಕೈದು-ಆಯುಧ
ಪಱಿ-ನಿಂದೆ

ಖೇಚರ-ಗಂಧರ್ವ
ಗುಡಿ-ಬಾವುಟ
ಚಾಳಿಸು-ಅಲುಗಿಸು
ಚಿತ್ತೋದ್ಭವ-ಮನ್ಮಥ
ಚೂತ-ಮಾವು
ಜೋಹ-ವೇಷ
ಜ್ಯಾ-ಬಿಲ್ಲಿನ ಹಗ್ಗ
ತಳ್ಪೊಯ್-ಒತ್ತಾಗಿ ಸೇರಿಕೊ
ತಟ್ಟೈಸು-ತಪ್ಪಿಕೊ
ತಿಗ್ಮರುಚಿ-ಸೂರ್ಯ
ತುಂಡ-ಕೊಕ್ಕು
ದೂಸಱ್-ಕಾರಣ
ದೋರ್ಗರ್ವ-ಬಾಹುಬಲ
ದ್ವಿರದ-ಆನೆ
ಧೂರ್ಜಟಿ-ಶಿವ
ನಾಡೆ-ವಿಶೇಷವಾಗಿ
ನಿಮಿರ್ಚು-ವಿಸ್ತರಿಸು
ನೀರೋಡು-ಕಾಂತಿಗುಂದು
ನೀಲೀರಾಗ-ದುರ್ಮೋಹ
ನೇವಾಳ-ಸರ
ಪಕ್ಷ್ಮ-ರೆಪ್ಪೆ
ಪಡಲ್ವಡಿಸು-ಉರುಳಿಸು
ಪತತ್ರಿ-ಬಾಣ
ಪರತ್ರ-ಪರಲೋಕ
ಪಟಿಗುಲ್-ಹರಿಗೋಲು
ಪಸುರ್ಪು-ಹಸುರು

ಪಂಕ-ಕೆಸರು
ಪ್ರತಾನ-ಸಮೂಹ
ಪಾಡಱ-ಸೊರಗು
ಪಾರಾವಾರ-ಸಾಗರ
ಪಾಟಿ-ಕ್ರಮ
ಪೆರೆ-ಪೊರೆ
ಪೆಱ್-ಚಂದ್ರ
ಪೆಂಪು-ಹಿರಿಮೆ
ಪುದಿ-ಮುಚ್ಚು
ಬರ್ಕೆವಲಸು-ಒಂದು ಜಾತಿಯ ಹಲಸು
ಬಾರಿಸು-ನಿವಾರಿಸು
ಬೀಸರ-ನಾಶ
ಬೆಟ್ಟು-ಬೆಟ್ಟ
ಬೆನ್ನೀರ್-ಬಿಸಿನೀರು
ಬೆಸ-ಕಾರ್ಯ
ಬೆಸಕೆಯ್-ಸೇವೆಮಾಡು
ಭೈತ್ರ-ಹಡಗು
ಮಗುಳ್-ಹಿಂದಿರುಗು
ಮಡಲ್-ಹಬ್ಬು
ಮತ್ತೇಭ-ಮದ್ದಾನೆ
ಮನೋಭವ-ಮನ್ಮಥ
ಮನ್ಯು-ದುಃಖ
ಮಯ್ಗರೆ-ಅಡಗಿಕೊ
ಮರೀಚಿ-ಕಿರಣ
ಮರ್ಯಾದೆ-ಮೇರೆ
ಮಲಯಜ-ಶ್ರೀಗಂಧ

ಮಾತಂಗ-ಆನೆ
ಮುನ್ನೀರ್-ಸಮುದ್ರ
ಮೌಕ್ತಿಕ-ಮುತ್ತು
ಯಷ್ಟಿ-ದಾರ; ಮಾಲೆ
ರಾಗಿಸು-ಸಂತಸಪಡು
ರುತಿ-ಶಬ್ದ
ರೋಮೋಭಾಗ-ದಿಗಂತ
ವಕ್ತ್ರ-ಮುಖ
ವಿಯದ್ವಳಯ-ಆಕಾಶ
ವಿಷಧರ-ಹಾವು
ವ್ಯಾಳ-ಸರ್ಪ
ಶುಕ್ತಿಕೆ-ಕಪ್ಪೆಚಿಪ್ಪು

ಶ್ರೀಖಂಡ-ಗಂಧದ ಮರ
ಸಪ್ತಚ್ಛದ-ಏಳೆಲೆ ಬಾಳೆ
ಸಾರ್-ಸಮೀಪಿಸು
ಸಾಸಿಗ-ಸಾಹಸಿ
ಸುಧಾಂಶು-ಚಂದ್ರ
ಸೂಡು-ದಹನ, ನಾಶ
ಸಂಬಳ-ಬುತ್ತಿ
ಸ್ಸುಕೃತ-ಪುಣ್ಯ
ಸೌದಾಮಿನಿ-ಮಿಂಚು
ಹಿಮರುಚಿ-ಚಂದ್ರ
ಹುತಾಶನ-ಅಗ್ನಿ
ಹೈಮಾಂಬುಜ-ಹೊಂದಾವರೆ

ಕೆ.ಸಂ. ೨೫೧೩೩–ಎಂ.ಯು.ಪಿ.ಎ.–೫,೦೦೦ ಪ್ರತಿಗಳು–೨–೯–೬೩

೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ

೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ

೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ

೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್

೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ

೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್

೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್

೩೯. ರಾಘವಾಂಕ—ರಾಮೇಗೌಡ

೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ

೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್

೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ

೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೪೫. ಚನ್ನಬಸವಣ್ಣ—ಓ. ಎಸ್. ಲಿಂಗಣ್ಣಯ್ಯ

೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೪೭. ಕಬೀರದಾಸ—ಡಾ. ಹಿರಣ್ಮಯ

೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ

೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ

೫೧. ಪೊನ್ನ—ಎನ್. ಅನಂತರಂಗಾಚಾರ್

೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ

೫೩. ದೇವರ ದಾಸಿಮಯ್ಯ—ಕೆ. ಅನಂತರಾಮು

೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ

೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ

೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ

೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ

೫೮. ಭಾರತೀಯ ಮಹಿಳಾ ಪರಂಪರೆ—ಬಿ. ಪಿ. ಚಂದ್ರಾಬಾಯಿ

೫೯. ಬಂಧುವರ್ಮ—ಬಿ. ಎಸ್. ಸಣ್ಣಯ್ಯ

೬೦. ಶ್ರೀರಾಮಾಯಣದರ್ಶನಂ—ಒಂದು ಸಮೀಕ್ಷೆ—ಡಾ. ಸಿ. ಪಿ. ಕೃಷ್ಣಕುಮಾರ್

೬೧. ದುರ್ಗಸಿಂಹ—ರಾಮೇಗೌಡ

೧೨. ಪಾಲ್ಕುರಿಕೆ ಸೋಮನಾಥ—ಡಾ. ಆರ್ವಿಯಸ್ ಸುಂದರಂ

೧೩. ಕನ್ನಡ ಸಾಹಿತ್ಯದ ಭಾಗವತ ಕವಿಗಳು—
ಬಿ. ಎಸ್. ವೇಣುಗೋಪಾಲ್

೧೪. ಕುಮಾರ ವಾಲ್ಮೀಕಿ—ಡಾ. ಹೊಸಬೆಟ್ಟು ಸೀತಾರಾಮ ಆಚಾರ್ಯ

೧೫. ಕವಿರಾಜ ಮಾರ್ಗ—ಸೀತಾರಾಮ ಜಾಗೀರ್‌ದಾರ್

೧೬. ಪಾರ್ಶ್ವ ಪಂಡಿತ—ಬಿ. ನಂ. ಚಂದ್ರಯ್ಯ

೧೭. ವೃತ್ತವಿಲಾಸ—ಡಾ. ಕೆ. ರಾಘವೇಂದ್ರರಾವ್

೧೮. ಅಗ್ಗಳದೇವ—ಎಚ್. ಎನ್. ಕೃಷ್ಣಾಜೋಯಿಸ್

೧೯. ಕನಕದಾಸ—ಮಳಲಿ ವಸಂತಕುಮಾರ್

೨೦. ಶ್ರೀಪಾದರಾಜರು—ಡಾ. ಟಿ. ಎನ್. ನಾಗರತ್ನ

೨೧. ಸಿದ್ಧರಾಮ—ಡಾ. ಎಂ. ರಾಮಕೃಷ್ಣ

೨೨. ರನ್ನ—ಡಾ. ಸಿ. ಪಿ. ಕೃಷ್ಣಕುಮಾರ್

೨೩. ಕನ್ನಡ ಕವಿಗಳು ಕಂಡ ಕ್ರೀಡೆಗಳು—ಡಾ. ಕೆ. ಶ್ರೀಕಂಠಯ್ಯ